

# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ನಿಬಂಧದ ವಿಷಯ

## 'ಪ್ರಾಣಪ್ರಿಯ ಕಾವ್ಯ' ಮತ್ತು ಕನ್ನಡ ನೇಮಿನಾಥ ಪುರಾಣಗಳಲ್ಲಿ ವೈರಾಗ್ಯ ಪ್ರಸಂಗಗಳ ತೌಲನಿಕ ಅಧ್ಯಯನ


ಮಾರ್ಗದರ್ಶಕರು

ಡಾ.ಪ್ರಮೀಳಾ ಮಾಧವ್, ಎಂ.ಎ., ಪಿ.ಹೆಚ್.ಡಿ

ಸಂಶೋಧನಾ ವಿದ್ಯಾರ್ಥಿನಿ

ಶ್ರೀಮತಿ ಕೆ. ನಳಿನ


ವರ್ಷ: ೨೦೧೦-೨೦೧೧




ಅಧ್ಯಯನ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,

ನೇ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ

ಬೆಂಗಳೂರು – ೫೬೦೦೧೯



# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ನಿಬಂಧದ ವಿಷಯ

## 'ಪ್ರಾಣಪ್ರಿಯ ಕಾವ್ಯ' ಮತ್ತು ಕನ್ನಡ ನೇಮಿನಾಥ ಪುರಾಣಗಳಲ್ಲಿ ವೈರಾಗ್ಯ ಪ್ರಸಂಗಗಳ ತೌಲನಿಕ ಅಧ್ಯಯನ



ಮಾರ್ಗದರ್ಶಕರು
ಡಾ.ಪ್ರಮೀಳಾ ಮಾಧವ್, ಎಂ.ಎ., ಪಿ.ಹೆಚ್.ಡಿ

ಸಂಶೋಧನಾ ವಿದ್ಯಾರ್ಥಿನಿ
ಶ್ರೀಮತಿ ಕೆ. ನಳಿನ

ವರ್ಷ: ೨೦೧೦-೨೦೧೧



ಅಧ್ಯಯನ ಕೇಂದ್ರ
ಬಿ.ಎಂ.ಶ್ರೀ, ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,
೩ನೇ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ
ಬೆಂಗಳೂರು - ೫೬೦೦೧೯

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೦-೧೧ ನೇ ಸಾಲಿನ ಎಂ.ಫಿಲ್ ಪದವಿಗಾಗಿ **'ಪ್ರಾಣಪ್ರಿಯ ಕಾವ್ಯ' ಮತ್ತು ಕನ್ನಡ ನೇಮಿನಾಥ ಪುರಾಣಗಳಲ್ಲಿ ವೈರಾಗ್ಯ ಪ್ರಸಂಗಗಳ ತೌಲನಿಕ ಅಧ್ಯಯನ"** ಎಂಬ **ಶೀರ್ಷಿಕೆಯ ಈ ನಿಬಂಧವನ್ನು ಡಾ.ಪ್ರಮೀಳಾ ಮಾಧವ್, ಎಂ.ಎ., ಪಿ.ಹೆಚ್.ಡಿ.,** ಆಚಾರ್ಯ ಪಾಠಶಾಲಾ ವಾಣಿಜ್ಯ ಕಾಲೇಜು, ನರಸಿಂಹರಾಜ ಕಾಲೋನಿ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು. ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

K

ಸಂಶೋಧನಾ ವಿದ್ಯಾರ್ಥಿನಿ

ಕೆ. ನಳಿನ

ಸ್ಥಳ: ಬೆಂಗಳೂರು.

ದಿನಾಂಕ: 7-6-2011

## ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2010-2011 ಸಾಲಿನ ಎಂ.ಫಿಲ್. ಪದವಿಗಾಗಿ **"'ಪ್ರಾಣಪ್ರಿಯ ಕಾವ್ಯ' ಮತ್ತು ಕನ್ನಡ ನೇಮಿನಾಥ ಪುರಾಣಗಳಲ್ಲಿ ವೈರಾಗ್ಯ ಪ್ರಸಂಗಗಳ ತೌಲನಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು ಶ್ರೀಮತಿ ಕೆ.ನಳಿನ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.



ಮಾರ್ಗದರ್ಶಕರು

**ಡಾ.ಪ್ರಮೀಳಾ ಮಾಧವ್, ಎಂ.ಎ., ಪಿ.ಹೆಚ್.ಡಿ.**

Dr. Pramila Madhav, MA Ph.d., Research Guide, A. P. S College of Commerce, N. R. Colony, Bangalore

**ಸ್ಥಳ : ಬೆಂಗಳೂರು**

**ದಿನಾಂಕ:** 07-06-2011

# ಪರಿವಿಡಿ

# ಪೀಠಿಕೆ, ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

**ಪೀಠಿಕೆ:**

ಕನ್ನಡ ಸಾಹಿತ್ಯ ಪ್ರಾರಂಭವಾಗುವುದೇ ಜೈನ ಕವಿಗಳಿಂದ ಎಂಬುದು ಗಮನಾರ್ಹ ಸಂಗತಿ. ಈ ಜೈನ ಕವಿಗಳು ಜೈನ ಧರ್ಮದ ತತ್ತ್ವ-ಚಿಂತನೆಗಳನ್ನು, ಆಚಾರ-ವಿಚಾರಗಳನ್ನು ಪ್ರಚಾರ ಮತ್ತು ಪ್ರಸಾರ ಮಾಡುವ ಉದ್ದೇಶ ಹೊಂದಿದ್ದು ಅವರ ಸಾಹಿತ್ಯ ಕೃತಿಗಳು ಜೈನಧರ್ಮದ ತೀರ್ಥಂಕರರ ಚರಿತ್ರೆಗಳನ್ನೂ ಜೈನಶ್ರಾವಕರ. ಮುನಿಗಳ ಚಾರಿತ್ರ್ಯವನ್ನೂ ಕನ್ನಡ ಜನತೆಗೆ ಮೊದಲ ಬಾರಿಗೆ ಪ್ರಬುದ್ಧವಾಗಿ ಹಾಗೂ ಆಕರ್ಷಕವಾಗಿ ತಿಳಿಸಿದವು. ಹೀಗೆ ಸಾಹಿತ್ಯ ರಚನೆಯಲ್ಲಿ ತೊಡಗಿದಕವಿಗಳು ಕೇವಲ ಧಾರ್ಮಿಕ ಸಾಹಿತ್ಯಗಳಲ್ಲಿ ಮಾತ್ರ ತೊಡಗಿರದೆ ಮಾನವೀಯ ಮೌಲ್ಯಗಳನ್ನು ಹೊಂದಿರುವ ಕಾವ್ಯಗಳು. ಶಾಸ್ತ್ರಗ್ರಂಥಗಳು. ಸ್ತೋತ್ರಸಾಹಿತ್ಯ ಇವುಗಳನ್ನು ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿಸಿದ್ದಾರೆ. ಸಂಸ್ಕೃತದ ಅನೇಕ ಮಹಾಕಾವ್ಯಗಳು. ಲಘು ಕಾವ್ಯಗಳು ಕನ್ನಡಕ್ಕೆ ಅನುವಾದಗೊಂಡಿವೆ. ಕಾಳಿದಾಸನ ಮೇಘಸಂದೇಶವಂತೂ ಜೈನ ಕವಿಗಳ ಮನಸೂರೆಗೊಂಡಿದ್ದು. ಅವರು ಅದರಲ್ಲಿ ಅನೇಕ ರೀತಿಯ ಬದಲಾವಣೆಗಳನ್ನು ಮಾಡಿಕೊಂಡು ರಚನೆಯನ್ನು ಮಾಡಿದ್ದಾರೆ ಹಾಗೂ ಮೇಘದೂತದ ಪ್ರತಿಪದ್ಯದ ನಾಲ್ಕನೆ ಸಾಲನ್ನು ಉಳಿಸಿಕೊಂಡು ಮೊದಲ ಮೂರುಪಾದಗಳನ್ನು ರಚಿಸಿ ಸಮಸ್ಯಾಪೂರ್ಣ ಕಾವ್ಯಗಳ ರಚನೆಗಳನ್ನು ಮಾಡಿದ್ದಾರೆ [(1)]. ಇವರ ಸಂಸ್ಕೃತದ ಹಲವು ಗ್ರಂಥಗಳು ಕನ್ನಡಕ್ಕೆ ಅನುವಾದಗೊಂಡಿವೆ.

ಆದರೆ ಅನುವಾದಗೊಂಡ ಎಲ್ಲ ಕಾವ್ಯಗಳೂ ಕನ್ನಡ ಜನತೆಗೆ ಪರಿಚಿತವಾಗಿಲ್ಲ. ಅಂತಹ ಕಾವ್ಯಗಳಲ್ಲಿ ರತ್ನಸಿಂಹ ಮುನಿಗಳಿಂದ ರಚಿತವಾದ ಸಂಸ್ಕೃತ ಭಾಷೆಯ 'ಪ್ರಾಣಪ್ರಿಯ ಕಾವ್ಯ'ವೆಂಬ ಲಘುಕಾವ್ಯವೂ ಒಂದು.

ಭಗವಾನ್ ಶ್ರೀ ಮಾನತುಂಗಾಚಾರ್ಯರು ಸಂಸ್ಕೃತದಲ್ಲಿ ರಚಿಸಿರುವ 'ಭಕ್ತಾಮರ ಸ್ತೋತ್ರ'ವು ಲೋಕಪ್ರಸಿದ್ಧವಾಗಿದೆ. ಈ 'ಭಕ್ತಾಮರ ಸ್ತೋತ್ರ'ದ ಪ್ರತಿ ಶ್ಲೋಕದ ಕೊನೆಯ ಪಾದವನ್ನು ಶ್ರೀ ರತ್ನಸಿಂಹ ಮುನಿಗಳು ತಮ್ಮ ಪ್ರಾಣಪ್ರಿಯ ಕಾವ್ಯದ ಪ್ರತಿ ಶ್ಲೋಕದ ಕೊನೆಯ ಪಾದವನ್ನಾಗಿ ಅಳವಡಿಸಿಕೊಂಡು ಕಾವ್ಯ ರಚನೆ ಮಾಡಿರುವುದು ಅವರ ಕಾವ್ಯದ ವೈಶಿಷ್ಟ್ಯವಾಗಿದೆ. ಈ ಕಾವ್ಯವನ್ನು ಶ್ರೀ ಭುವನಹಳ್ಳಿ ಡಿ. ಪದ್ಮನಾಭ ಶರ್ಮರು ಮಲ್ಲಿಕಾ ಮಾಲಾ ಛಂದಸ್ಸಿನಲ್ಲಿ ಕನ್ನಡಕ್ಕೆ ಬಹಳ ಸುಂದರವಾಗಿ ಅನುವಾದಿಸಿದ್ದಾರೆ.

**ಉದ್ದೇಶ:**

ಜೈನ ಧರ್ಮದ ಇಪ್ಪತ್ನಾಲ್ಕು ಜನ ತೀರ್ಥಂಕರರಲ್ಲಿ ಆದಿನಾಥ, ಪಾರ್ಶ್ವನಾಥ ಹಾಗೂ ಮಹಾವೀರರ ಬಗೆಗೆ ಉಳಿದ ತೀರ್ಥಂಕರರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಾವ್ಯಗಳು ರಚನೆಯಾಗಿವೆ. ಅದರಲ್ಲೂ ಇಪ್ಪತ್ತೆರಡನೆಯ ತೀರ್ಥಂಕರರಾದ ನೇಮಿಜಿನೇಶರ ಬಗೆಗೆ ಪ್ರಾಕೃತ, ಸಂಸ್ಕೃತ ಹಾಗೂ ಕನ್ನಡ ಮೂರೂ ಭಾಷೆಗಳಲ್ಲೂ ಕಾವ್ಯಗಳ ರಚನೆಯಾಗಿದೆ. ಕನ್ನಡದಲ್ಲಿ ಸುಮಾರು ಒಂಬತ್ತು ನೇಮಿನಾಥ ಪುರಾಣಗಳು ರಚನೆಯಾಗಿವೆ. ಈ ಒಂಬತ್ತು ಕಾವ್ಯಗಳ ವಸ್ತು ಒಂದೇ ಆದರೂ ಭಾಷಾಶೈಲಿ, ಛಂದಸ್ಸು, ಕಥೆಯನ್ನು (ವಸ್ತುವನ್ನು) ಪ್ರಸ್ತುತ ಪಡಿಸುವ ರೀತಿ ಎಲ್ಲವೂ ಭಿನ್ನವೂ ವಿಶಿಷ್ಟವೂ ಆಗಿದೆ. ಈ ಎಲ್ಲ ನೇಮಿನಾಥ ಪುರಾಣಗಳಲ್ಲಿ ನಿರೂಪಿತವಾದ ನೇಮಿನಾಥನ ವೈರಾಗ್ಯ ಪ್ರಸಂಗಗಳನ್ನು ಸಂಸ್ಕೃತ ಹಾಗೂ ಕನ್ನಡ 'ಪ್ರಾಣಪ್ರಿಯ ಕಾವ್ಯ'ಗಳಲ್ಲಿ ಬರುವ ನೇಮಿನಾಥನ ವೈರಾಗ್ಯ ಪ್ರಸಂಗದೊಂದಿಗೆ ತೌಲನಿಕ ಅಧ್ಯಯನ ಮಾಡಲಾಗಿದೆ. ರತ್ನಸಿಂಹ ಮುನಿಗಳು ಸಂಸ್ಕೃತದಲ್ಲಿ ರಚಿಸಿದ ಸಮಸ್ಯಾಪೂರ್ಣ ಕಾವ್ಯವಾದ 'ಪ್ರಾಣಪ್ರಿಯ ಕಾವ್ಯ'ಕ್ಕೆ ಆಧಾರ ಶ್ರೀ ಮಾನತುಂಗಾಚಾರ್ಯರ ಭಕ್ತಾಮರ ಸ್ತೋತ್ರ. ಈ 'ಭಕ್ತಾಮರ ಸ್ತೋತ್ರ'ದ ಕೊನೆಯ ಪಾದದ ಅರ್ಥವು ರತ್ನಸಿಂಹ ಮುನಿಗಳ ಶೃಂಗಾರರಸ ಪ್ರಧಾನವಾದ ಮೂಲ 'ಪ್ರಾಣಪ್ರಿಯ ಕಾವ್ಯ' ಹಾಗೂ ಪದ್ಮನಾಭ ಶರ್ಮರ ಪ್ರಾಣಪ್ರಿಯ ಕಾವ್ಯಗಳಲ್ಲಿ ಹೇಗೆ ಧ್ವನಿಸುತ್ತದೆ ಎಂಬುದನ್ನು ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

**ಸ್ವರೂಪ ಮತ್ತು ವ್ಯಾಪ್ತಿ:**

ಕನ್ನಡ ನೇಮಿನಾಥ ಪುರಾಣಗಳ ಕಿರು ನೋಟ, ಕನ್ನಡ ನೇಮಿನಾಥ ಪುರಾಣಗಳಿಗೆ ಹಿನ್ನೆಲೆಯಾದ ಸಂಸ್ಕೃತ ನೇಮಿನಾಥ ಪುರಾಣಗಳು, ಹರಿವಂಶವೆಂಬ ಹೆಸರಿನಲ್ಲಿರುವ ನೇಮಿನಾಥ ಪುರಾಣಗಳು, ಪ್ರಾಕೃತ ನೇಮಿನಾಥ ಪುರಾಣಗಳ ಪರಿಚಯ, ಶ್ರೀ ಭುವನಹಳ್ಳಿ ಡಿ.ಪದ್ಮನಾಭ ಶರ್ಮರ 'ಪ್ರಾಣಪ್ರಿಯ ಕಾವ್ಯ'ದ ಪರಿಚಯ, ಸಂಸ್ಕೃತದಲ್ಲಿ 'ಭಕ್ತಾಮರ ಸ್ತೋತ್ರ'ವನ್ನು ರಚಿಸಿದ ಶ್ರೀ ಮಾನತುಂಗಾಚಾರ್ಯರ ಪರಿಚಯ, ಭಕ್ತಾಮರ ಸ್ತೋತ್ರದ ಪ್ರತಿ ಶ್ಲೋಕದ ಕೊನೆಯ ಪಾದವನ್ನು ತಮ್ಮ 'ಪ್ರಾಣಪ್ರಿಯ ಕಾವ್ಯ'ದ ಪ್ರತಿ ಶ್ಲೋಕದ ಕೊನೆಯ ಪಾದವನ್ನಾಗಿ ಅಳವಡಿಸಿಕೊಂಡು ಕಾವ್ಯವನ್ನು ರಚಿಸಿದ ಶ್ರೀ ರತ್ನಸಿಂಹ ಮುನಿಗಳ ಪರಿಚಯ ಮಾಡಿಕೊಡಲಾಗಿದೆ. 'ಸಮಸ್ಯಾಪೂರ್ಣ ಕಾವ್ಯ' ಎನ್ನುವುದು ಚಿತ್ರಕಾವ್ಯದ ಒಂದು ಬಗೆಯಾದ್ದರಿಂದ ಚಿತ್ರಕಾವ್ಯ ಎಂದರೇನು? ಅವುಗಳ ಬಗೆಗಳು, 'ಪ್ರಾಣಪ್ರಿಯ ಕಾವ್ಯ'ದ ಹಿನ್ನೆಲೆ ಕಥೆ, 'ಪ್ರಾಣಪ್ರಿಯ ಕಾವ್ಯ'ವೆಂದು ಹೆಸರು ಬರಲು ಕಾರಣ, 'ಪ್ರಾಣಪ್ರಿಯ ಕಾವ್ಯ'

ಮತ್ತು ಇತರ ಕನ್ನಡ ನೇಮಿನಾಥ ಪುರಾಣಗಳಲ್ಲಿನ ವೈರಾಗ್ಯ ಪ್ರಸಂಗದಲ್ಲಿ ಕಂಡುಬರುವ ಸಾಮ್ಯ-ವೈಷಮ್ಯಗಳನ್ನು ಹೇಳಿ ತೌಲನಿಕ ಅಧ್ಯಯನ ನಡೆಸುವುದರ ಮೂಲಕ ಕನ್ನಡದ ವಿಶಿಷ್ಟ ಲಘುಕಾವ್ಯದ ವಿಮರ್ಶಾತ್ಮಕ ಪರಿಚಯ ಮತ್ತು ತೌಲನಿಕ ನೋಟವನ್ನು ನೀಡುವುದು. ಪಾದಪೂರ್ಣಶ್ಲೋಕದ ಆಕರ ಗ್ರಂಥವಾದ ಭಕ್ತಾಮರ ಸ್ತೋತ್ರ ,ರತ್ನ ಸಿಂಹ ಮುನಿಗಳ ಮೂಲ 'ಪ್ರಾಣಪ್ರಿಯ ಕಾವ್ಯ' ಹಾಗೂ ಕನ್ನಡ ಪ್ರಾಣಪ್ರಿಯ ಕಾವ್ಯದ ವಸ್ತುವನ್ನು ಪರಿಚಯಿಸುವುದು ಈ ಸಂಪ್ರಬಂಧದ ಸ್ವರೂಪ ಮತ್ತು ವ್ಯಾಪ್ತಿಯಾಗಿರುತ್ತದೆ.

---

**ಅಡಿ ಟಿಪ್ಪಣಿ**

(1) ಸಂಸ್ಕೃತ ಸಾಹಿತ್ಯದ ಇತಿಹಾಸ 2003 – ಮೂ.: ಆಚಾರ್ಯ ಬಲದೇವ ಉಪಾಧ್ಯಾಯ, ಅ.: ಎಸ್.ರಾಮಚಂದ್ರ ಶಾಸ್ತ್ರಿ – ಪ್ರ.: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ – ಪುಟ: 483.

## ಅ. ಕನ್ನಡ ನೇಮಿನಾಥ ಪುರಾಣಗಳಿಗೆ ಹಿನ್ನೆಲೆಯಾದ ಸಂಸ್ಕೃತ ಮತ್ತು ಪ್ರಾಕೃತ ನೇಮಿನಾಥ ಪುರಾಣಗಳು:

22ನೆಯ ತೀರ್ಥಂಕರನಾದ ನೇಮಿನಾಥನನ್ನು ಕುರಿತಂತೆ ಒಂಬತ್ತಕ್ಕೂ ಹೆಚ್ಚು ಕನ್ನಡ ನೇಮಿನಾಥ ಪುರಾಣಗಳಿವೆ. ಈ ಪುರಾಣಗಳಿಗೆ (ಮೂಲ) ಹಿನ್ನೆಲೆಯೆಂದರೆ 'ಸಂಸ್ಕೃತ' ಹಾಗೂ 'ಪ್ರಾಕೃತ' ಭಾಷೆಗಳಲ್ಲಿರುವ ನೇಮಿನಾಥನನ್ನು ಕುರಿತ ಸಾಹಿತ್ಯ ರಾಶಿ. ಈ ಎರಡೂ ಭಾಷೆಗಳಲ್ಲಿನ ನೇಮಿನಾಥ ಚರಿತ್ರೆಗಳು ಹೀಗಿವೆ:

### ಸಂಸ್ಕೃತ ನೇಮಿನಾಥ ಚರಿತ್ರೆಗಳು:

1. **ನೇಮಿನಾಥ ಚರಿತ್ರೆ (ಕ್ರಿ.ಶ.1053):**

ಸೂರಾಚಾರ್ಯನು ಇದರ ಕರ್ತೃ. ಈತನು ದ್ರೋಣಾಚಾರ್ಯನೆಂಬುವನ ಶಿಷ್ಯ. ಇದನ್ನು ಧಾರಾನಗರದ ಭೋಜರಾಜನ ಆಳ್ವಿಕೆಯಲ್ಲಿ ಬರೆದನು. ಈ ಕಾವ್ಯ ವೃಷಭನಾಥ ನೇಮಿನಾಥರಿಬ್ಬರಿಗೂ ಅನ್ವಯಿಸುವಂತಿರುವುದರಿಂದ ಇದೊಂದು ದ್ವಿಸಂಧಾನ ಕಾವ್ಯವಾಗಿದೆ.

2. **ನೇಮಿನಾಥ ಚರಿತ್ರೆ (ಕ್ರಿ.ಶ.13ನೆಯ ಶ.):**

ನಾಗೇಂದ್ರಗಚ್ಛದ ವಿಜಯಸೇನ ಸೂರಿಯ ಶಿಷ್ಯ ಉದಯ ಪ್ರಭ ಸೂರಿ ಇದರ ಕರ್ತೃ.

3. **ನೇಮಿನಾಥ ಚರಿತ್ರ (ಕ್ರಿ.ಶ.1438):**

ಖರತರಗಚ್ಛದ ಕೀರ್ತಿರಾಜ ಉಪಾಧ್ಯಾಯನು ಇದರ ಕರ್ತೃ. ಇದರಲ್ಲಿ 12 ಆಶ್ವಾಸಗಳಿದೆ. ಈ ಕೃತಿಯು ಲಘು ಪ್ರಮಾಣದ್ದಾಗಿದ್ದರೂ ಕವಿ ಅದನ್ನು 'ಮಹಾಕಾವ್ಯ'ವೆಂದು ಕರೆದಿದ್ದಾನೆ. ನೇಮಿನಾಥನ ಪಂಚಕಲ್ಯಾಣವೂ ದೀಕ್ಷಾಪ್ರಕರಣವೂ ಸಾಂಪ್ರದಾಯಿಕವಾದ ಶೈಲಿಯಲ್ಲಿದ್ದು ನಿರರ್ಗಳತೆ, ಪದಮೈತ್ರಿ ಚೆನ್ನಾಗಿ ಕಾಣುತ್ತವೆ. ಶ್ಲೋಕವಲ್ಲದೆ ವಿವಿಧ ಛಂದಸ್ಸಿನ ವರ್ಣವೃತ್ತಗಳನ್ನು ಕೂಡ ಈ ಕೃತಿಯಲ್ಲಿ ಬಳಸಲಾಗಿದೆ.

4. **ನೇಮಿನಾಥ ಚರಿತ್ರ (ಕ್ರಿ.ಶ.1611):**

ತಪಾಗಚ್ಛದ ವಿಜಯ ಸೂರಿಯ ಶಿಷ್ಯ ಕನಕವಿಜಯನಿಗೆ ಶಿಷ್ಯನಾದ ಗುಣವಿಜಯನು ಇದರ ಕರ್ತೃ. ಈ ಕೃತಿಯು ಗದ್ಯದಲ್ಲಿದ್ದು 13 ಆಶ್ವಾಸಗಳನ್ನು ಹೊಂದಿದೆ.

5. **ನೇಮಿನಾಥ ಚರಿತ್ರ (ಕಾಲ– .....)**

ವಜ್ರಸೇನನ ಶಿಷ್ಯ ಹರಿಷೇಣನು ಇದರ ಕರ್ತೃ. ಕವಿಯು 'ಕರ್ಪೂರಪ್ರಕರ' ಎಂಬ ತನ್ನ ಬೇರೊಂದು ಗ್ರಂಥದಲ್ಲಿ ಈ ಕೃತಿಯ ಬಗೆಗೆ ಉಲ್ಲೇಖಿಸಿದ್ದಾನೆ.

6. **ನೇಮಿನಾಥ ಚರಿತ್ರೆ: (ಕಾಲ – .....) ಕರ್ತೃ ಭೋಜಸಾಗರ**

7. **ನೇಮಿನಾಥ ಚರಿತ್ರೆ: (ಕಾಲ – .....) ಕರ್ತೃ ತಿಲಾಕಾಚಾರ್ಯ**

8. **ನೇಮಿನಾಥ ಚರಿತ್ರೆ: (ಕಾಲ – .....) ಕರ್ತೃ ನರಸಿಂಹ**

9. **ನೇಮಿನಾಥ ಚರಿತ್ರೆ:** ಈ ಚರಿತ್ರೆಯ ಕರ್ತೃ ಹಾಗೂ ಕಾಲದ ಬಗ್ಗೆ ಎಲ್ಲೂ ಮಾಹಿತಿಯು ದೊರೆತಿಲ್ಲ.

10. **ನೇಮಿನಾಥ ಪುರಾಣ: (ಕಾಲ – .....)**

ಮಲ್ಲಿ ಭೂಷಣನ ಶಿಷ್ಯ ಬ್ರಹ್ಮನೇಮಿದತ್ತನು ಇದರ ಕರ್ತೃ. ಈ ಕವಿಯ ನೇಮಿ 'ನಿರ್ವಾಣ ಕಾವ್ಯ' ಎಂಬುದು ಇದೇ ಇರಬಹುದು ಎಂದು ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. ಇದರಲ್ಲಿ 16 ಅಧ್ಯಾಯಗಳಿವೆ.

ಈ ಗ್ರಂಥವು ಹರಿವಂಶ – ಕುರುವಂಶಗಳ ಕಥೆಗಳನ್ನು ಒಳಗೊಂಡು ನೇಮಿನಾಥ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳುವ ಕೃತಿಯಾಗಿದೆ. ಈ ಕೃತಿಯಲ್ಲಿ ಆರು ಭವಗಳ ಕಥೆಗಳನ್ನು ಮಾತ್ರ ಹೇಳಲಾಗಿದೆ. ಇಲ್ಲಿ ನೇಮಿನಾಥನ ಪೂರ್ವ ಭವಾವಳಿಗಳಿಂದಲೇ ಕಥೆ ಮೊದಲಾಗುವುದು. ಗುಣಭದ್ರರ ಉತ್ತರಪುರಾಣವನ್ನು ಆಧಾರವಾಗಿಟ್ಟುಕೊಂಡು ಸ್ವಲ್ಪ ವಿಸ್ತಾರವಾಗಿ ಕೃತಿರಚನೆ ಮಾಡಿರಬಹುದು ಎಂದು ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.

11. **ನೇಮಿ ನಿರ್ವಾಣ ಕಾವ್ಯ (ಕಾಲ– .....):**

ಇದರ ಕರ್ತೃ ವಾಗ್ಭಟ. ಇವನು ಛಾಹಡ ಎಂಬುವರ ಮಗ. ಪ್ರಾಗ್ವಾಟ ಅಥವಾ ಪೋರವಾಡ ಕುಲದವನು. ಈತನು ಜನಿಸಿದ್ದು ಅಹಿಛತ್ರಪುರದಲ್ಲಿ. ಕವಿ ಪ್ರಾಯಃ ದಿಗಂಬರ ಸಂಪ್ರದಾಯದವನಿರಬಹುದು. ಈ ಕೃತಿಯಲ್ಲಿ 15 ಸರ್ಗಗಳಿವೆ. ಪ್ರಮಾಣದಲ್ಲಿ ಇದು ಕೂಡ 958 ಪದ್ಯಗಳನ್ನೊಳಗೊಂಡ ಲಘು ಕಾವ್ಯವೇ. ಆದರೂ ಕವಿ ಮಹಾಕಾವ್ಯವೆಂದು ಕರೆದಿದ್ದಾನೆ. ಈ ಗ್ರಂಥವನ್ನು 'ನೇಮಿ ನಿರ್ವಾಣ' ಕಾವ್ಯ ಎಂದು ಕರೆದಿದ್ದರೂ ನೇಮಿನಾಥನ ಜನನದಿಂದ ಮೊದಲುಗೊಂಡು ತೀರ್ಥಂಕರನ ಪಂಚ ಕಲ್ಯಾಣಗಳನ್ನು ಇದರಲ್ಲಿ ಸಂಕ್ಷಿಪ್ತವಾಗಿ ವರ್ಣಿಸಲಾಗಿದೆ. ಈ ಕೃತಿಯಲ್ಲಿ ನೇಮಿನಾಥನ ಪಂಚಕಲ್ಯಾಣಗಳಿಗೆ ಪ್ರಾಮುಖ್ಯವಿತ್ತು. ಆತನ ಜೀವನ ವೃತ್ತಾಂತವನ್ನೆಲ್ಲಾ ಒಗ್ಗೂಡಿಸಿ ಅಡಕವಾಗಿ ವರ್ಣಿಸಿರುವುದು ಕಂಡು ಬರುತ್ತದೆ. ನೇಮಿನಾಥನ ಒಂಬತ್ತು ಭವಗಳ ನಿರೂಪಣೆ ಸಂಕ್ಷೇಪವಾಗಿಯಾದರೂ ಇಲ್ಲಿ ಬಂದಿರುವುದು ಗಮನಾರ್ಹ.

**12. ನೇಮಿದೂತ ಕಾವ್ಯ (ಕಾಲ- .....):**

ಈ ಕಾವ್ಯದ ಕರ್ತೃ ಸಾಂಗಣನೆಂಬವನ ಪುತ್ರ ವಿಕ್ರಮ. ಈತನ ಕೃತಿಯಿಂದ ಈತನ ಕಾಲ ದೇಶಾದಿ ವಿವರಗಳು ತಿಳಿದು ಬರುವುದಿಲ್ಲ. ಪ್ರಾಯಃ ಈತನು ದಿಗಂಬರ ಸಂಪ್ರದಾಯದವನಿರಬಹುದು. ವಾಸ್ತವವಾಗಿ ಈ ಕೃತಿಯ ಹೆಸರು ನೇಮಿಚರಿತವೆಂದಿರಬೇಕು ಎಂಬುದು ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರಿಗಳ ಅಭಿಪ್ರಾಯ. ಇದು ಮೇಘದೂತದಂತಹ ಕಾವ್ಯ. ಕಾಳಿದಾಸನ ಮೇಘದೂತದ ಪ್ರತಿ ಪದ್ಯದ ಅಂತಿಮ ಪಾದಕ್ಕೆ ಸ್ವಕತೃಕವಾದ ಮೂರು ಪಾದಗಳನ್ನು ಸೇರಿಸಿ ಈ ಕೃತಿಯನ್ನು ವಿಕ್ರಮನು ರಚಿಸಿದ್ದಾನೆ. ಅದರಿಂದಾಗಿ ಈ ಕೃತಿಗೆ 'ನೇಮಿದೂತ ಕಾವ್ಯ' ಎಂಬ ಹೆಸರು ಬಂದಿದೆ. ಇದರಲ್ಲಿ ಯಾವ ರೀತಿಯ ದೌತ್ಯವೂ ವರ್ಣಿತವಾಗಿಲ್ಲ. ರಾಜೀಮತಿಯು ನೇಮಿನಾಥನನ್ನು ಸಂಸಾರಾಸಕ್ತನನ್ನಾಗಿ ಮಾಡಲು ಏನೇನು ಪ್ರಯತ್ನ ಮಾಡಿದಳು. ಹೇಗೆ ವಿರಹವ್ಯಥೆಯನ್ನು ತೋಡಿಕೊಂಡಳು ಎಂಬುದನ್ನು ವರ್ಣಿಸಿ ಕಾವ್ಯವನ್ನು ಮನೋಜ್ಞವಾಗಿ ರಚಿಸಲಾಗಿದೆ.

**13. ನಾಭೇಯ ನೇಮಿನಾಥ ಕಾವ್ಯ (ನೇಮಿ ದ್ವಿಸಂಧಾನ ಕಾವ್ಯ) (ಕಾಲ-)**

ಬೃಹದ್ ಗಚ್ಛದ ಮುನಿ ಚಂದ್ರನಿಗೆ ಶಿಷ್ಯನಾದ ಅಜಿತ ಸೇನನ ಶಿಷ್ಯ ಹೇಮಚಂದ್ರ ಸೂರಿ ಇದರ ಕರ್ತೃ. ಕುಮಾರಪಾಲ ಮಹಾರಾಜನ ಆಸ್ಥಾನದಲ್ಲಿದ್ದ ಶ್ರೀಪಾಲಕವಿ ಇದನ್ನು ತಿದ್ದಿದನು. ಇದನ್ನು ವೃಷಭನಾಥ ನೇಮಿನಾಥರಿಬ್ಬರಿಗೂಅನ್ವಯವಾಗುವಂತೆ ಬರೆದಿದೆ.

## ಪ್ರಾಕೃತ ನೇಮಿನಾಥ ಚರಿತ್ರ (ಪುರಾಣಗಳು):

**1. ನೇಮಿನಾಹಚರಿಉ (ನೇಮಿನಾಥ ಚರಿತ್ರ) (ಕಾಲ: ಕ್ರಿ.ಶ.1123):**

ಪ್ರಶ್ನವಾಹನ ಕುಲದ ಹರ್ಷಪುರೀಯಗಚ್ಛದ ಅಭಯದೇವನ ಶಿಷ್ಯನಾದ ಮಲಧಾರಿ ಹೇಮಚಂದ್ರ ಸೂರಿ ಇದರ ಕರ್ತೃ. ಕ್ರಿ.ಶ.1123ರಲ್ಲಿ ಈತನು 'ಮೇಡಕಾ' ಮತ್ತು 'ಛತ್ರಪತಿ'ಯಲ್ಲಿದ್ದು ಭವಭಾವನಾ ಮತ್ತು ಅದರ ವೃತ್ತಿಯನ್ನು ರಚಿಸಿದನು. ಪದ್ಯಾತ್ಮಕವಾದ ವೃತ್ತಿಯ ಹಲವು ಧಾರ್ಮಿಕ ಲೌಕಿಕ ಕಥೆಗಳಲ್ಲಿ ನೇಮಿನಾಥ ಚರಿತ್ರೆಯೇ ಹೆಚ್ಚಿನ ಸ್ಥಾನವನ್ನು ಪಡೆದಿದೆ.

**2. ನೇಮಿನಾಹ ಚರಿಉ (ನೇಮಿನಾಥ ಚರಿತ್ರ) (ಕಾಲ. ಕ್ರಿ.ಶ.1159):**

ಈ ಕೃತಿಯು ಅಪಭ್ರಂಶ ಭಾಷೆಯಲ್ಲಿದೆ. ಇದರ ಕರ್ತೃ ಜಿನಚಂದ್ರ ಸೂರಿಯ ಶಿಷ್ಯ ಶ್ರೀಚಂದ್ರನ ಶಿಷ್ಯನಾದ ಹರಿಭದ್ರ. ಈತನು ಶ್ವೇತಾಂಬರ ಸಂಪ್ರದಾಯದ ಕವಿ ಮತ್ತು ಹೇಮಚಂದ್ರನಿಗೆ ಸಮಕಾಲೀನ. ಈ ಗ್ರಂಥದ ಮೊದಲರ್ಧದಲ್ಲಿ ತೀರ್ಥಂಕರನ ಜೀವಿತ

ವಿವರಗಳಿಗಿಂತ ನೇಮಿನಾಥ ರಾಜೀಮತಿಯರ ಪೂರ್ವಭವಗಳನ್ನು ಬಹಳವಾಗಿ ವರ್ಣಿಸಲಾಗಿದೆ. ನೇಮಿನಾಥ ಕಥೆಯೊಂದಿಗೆ ಸನತ್ಕುಮಾರ ಚಕ್ರವರ್ತಿಯ ಕಥೆಯೂ ಸೇರಿಕೊಂಡು ಬಂದಿರುವುದು ಇಲ್ಲಿಯ ವಿಶೇಷ. ಈ ಕವಿಯು 24 ತೀರ್ಥಂಕರರ ಚರಿತ್ರೆಯನ್ನು ಬರೆದನೆಂದು ಭಾವಿಸಲಾಗಿದೆ.

**3. ನೇಮಿನಾಥ ಚರಿತ್ರ ಅಥವಾ ಅರಿಷ್ಟ ನೇಮಿ ಚಂದ್ರ (ಕ್ರಿ.ಶ.1176).**

ಬೃಹದ್‌ಗಚ್ಛದ ವಾದಿದೇವ ಸೂರಿಯ ಶಿಷ್ಯ ರತ್ನಪ್ರಭನು ಇದರ ಕರ್ತೃ. ಇದರಲ್ಲಿ 6 ಅಧ್ಯಾಯಗಳಿವೆ.

**4. ಣೇಮಿಣಾಹ ಚರಿಉ (ನೇಮಿನಾಥ ಚರಿತ್ರೆ) (ಕಾಲ: ...)**

ಈ ಗ್ರಂಥದ ಕರ್ತೃ ಲಖಮದೇವ (ಲಕ್ಷ್ಮಣದೇವ). ಈತನು ರಯಣನ (ರತ್ನದೇವನ) ಪುತ್ರ. ಈತನ ವಾಸಸ್ಥಳ ಮಾಲವದೇಶದ ಗೋಣಂದ. ಈ ಕವಿಯು ಪುರವಾಡ ವಂಶೋತ್ಪನ್ನ. ಈ ಕೃತಿಯ ರಚನೆಗೆ ಈತನಿಗೆ ಎಂಟೂವರೆ ತಿಂಗಳು ಹಿಡಿದವು. ಈ ಕೃತಿಯ ರಚನಾಕಾಲ ನಿಶ್ಚಯವಾಗಿಲ್ಲ. ಇದರ ಎರಡು ಹಸ್ತಪ್ರತಿಗಳ ಕಾಲ ಕ್ರಿ.ಶ.1453 ಮತ್ತು 1550. ಆದ್ದರಿಂದ ಕವಿ ಕ್ರಿ.ಶ.1453ರ ಮೊದಲು ಇದ್ದನೆಂದು ಮಾತ್ರ ಹೇಳಬಹುದು. ಇದರಲ್ಲಿ 4 ಸಂಧಿಗಳು. 83 ಕಡವಕಗಳು ಇವೆ. ಕೃತಿ ಪ್ರಧಾನವಾಗಿ ನೇಮಿಕಥೆಯನ್ನೇ – ಆತನ ಪಂಚ ಕಲ್ಯಾಣಗಳನ್ನೇ – ಕುರಿತಿದೆ.

**5. ನೇಮಿನಾಥ ಜನ್ಮಾಭಿಷೇಕ (ಕಾಲ: ...)**

ಈ ಕಾವ್ಯವು ಅಪಭ್ರಂಶ ಭಾಷೆಯಲ್ಲಿದೆ. ಜಿನಪ್ರಭ ಸೂರಿ ಇದರ ಕರ್ತೃ. 'ಶ್ರೀ ನೇಮಿನಾಥ ಭವಾಂತರ್' ಎಂಬ ಮರಾಠಿ ಭಾಷೆಯ ಸಣ್ಣ ಕಾವ್ಯವೊಂದು (ಪದ್ಯ ಸಂಖ್ಯೆ 70) ಈಚೆಗೆ ದೊರೆತು ಪ್ರಕಟವಾಗಿದೆ. ಜನಪದ ಶೈಲಿಯಲ್ಲಿರುವ ಈ ಕೃತಿಯ ಕರ್ತೃವಿನ ಕಾಲ ತಿಳಿದಿಲ್ಲವೆಂದು ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿಗಳು ಕೊಟ್ಟಿರುವ ಅಡಿಟಿಪ್ಪಣಿಯಲ್ಲಿ ಹೇಳಿದ್ದಾರೆ (ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ – ಪುಟ 30).

## ಸಂಸ್ಕೃತ ಹರಿವಂಶ ಪುರಾಣಗಳು:

### 1. ಹರಿವಂಶ ಪುರಾಣ (ಕ್ರಿ.ಶ.783):

ಪುನ್ನಾಟ ಸಂಘದ ಜಿನಸೇನಾಚಾರ್ಯರು ಇದರ ಕರ್ತೃ. ಉಪಲಬ್ಧವಾಗಿರುವ ಸಂಸ್ಕೃತ - ಪ್ರಾಕೃತ ಹರಿವಂಶಗಳಲ್ಲಿ ಜಿನಸೇನಾಚಾರ್ಯರ 'ಹರಿವಂಶ ಪುರಾಣ'ವೇ ಅತಿ ಪ್ರಾಚೀನವಾದದ್ದು. ಇದು ಒಂದು ವಿಶಿಷ್ಟ ಕಥಾ ಸಂಪ್ರದಾಯವನ್ನು ಮೊದಲಬಾರಿಗೆ ಪ್ರಸ್ತಾಪಿಸಿತು. ಇದರ ನಂತರ ಜೈನಪುರಾಣಗಳಲ್ಲಿ ರವಿಷೇಣಕೃತ 'ಪದ್ಮಪುರಾಣ'. ಜಟಾಸಿಂಹನಂದಿಯ ವರಾಂಗಚರಿತ ಇವೆರಡಾದ ಮೇಲೆ ಮೂರನೆಯ ಪ್ರಸಿದ್ಧ ಕೃತಿಯೇ ಜಿನಸೇನರ 'ಹರಿವಂಶ ಪುರಾಣ'.

ಹರಿವಂಶದ ಕಥಾವಸ್ತು ಪ್ರಧಾನವಾಗಿ 22ನೆಯ ತೀರ್ಥಂಕರನಾದ ನೇಮಿನಾಥನ ಚರಿತ್ರೆಯನ್ನು ಕುರಿತದ್ದು. 'ಅರಿಷ್ಟನೇಮಿಪುರಾಣ ಸಂಗ್ರಹೇ ಹರಿವಂಶೇ' ಎಂಬ ಸರ್ಗಾಂತ್ಯದ (ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರಿ) ಮಾತಿನಿಂದಲೇ ಇದನ್ನು ತಿಳಿಯಬಹುದು. ಈ ಗ್ರಂಥದಲ್ಲಿ ಜಿನನ ಪಂಚಕಲ್ಯಾಣಗಳು. ಜೈನಧರ್ಮದ ತತ್ತ್ವೋಪದೇಶವನ್ನು ಕುರಿತ ಬೋಧನೆಯ ಸಾರಸೂಕ್ತಿಗಳೂ. ಜೈನಧರ್ಮದ ಆಚಾರಾಂಗ. ವ್ರತೋಪಾಸಾದಿ ನಿಯಮಗಳೂ ಹಲವು ಜೀವಿಗಳು ಬೇರೆ ಬೇರೆ ಗತಿಗಳಲ್ಲಿ ಭವಗಳ ಜಂಜಡದಲ್ಲಿ ತೊಳಲಿ ಬಳಲುವ ಅನೇಕ ಕಥೆಗಳೂ ಇವೆ. ಕೌರವ ಪಾಂಡವರ ವೈಮನಸ್ಯದ ಕಥೆಗಿಂತ ವಸುದೇವನ ಪ್ರಣಯಲೀಲೆಗಳ. ಕೃಷ್ಣ ಬಲದೇವರ ವಿರಾದ್ಭುತ ಕಾರ್ಯಗಳ. ಪ್ರದ್ಯುಮ್ನನ ಕಿಶೋರಲೀಲೆಗಳ ಕಥೆಗಳೇ ಹೊರವಾಗಿ ಹುರುಪಾಗಿ ಬೆಳೆದು ನಾಯಕ ವ್ಯಕ್ತಿಯಾದ ನೇಮಿನಾಥನ ಚರಿತೆಗೆ ಪ್ರಾಧಾನ್ಯತೆ ಕಡಿಮೆಯಾಗಿದೆ. ಆತನ ಪಂಚಕಲ್ಯಾಣದ ಸಂಬಂಧವಾದ ವರ್ಣನೆಗಳ ಹೊರತು ಅವನ ಕಥೆಗೆ ಹೆಚ್ಚು ಪ್ರಾಶಸ್ತ್ಯ ಸಿಕ್ಕಿಲ್ಲ.

### 2. ಹರಿವಂಶ ಪುರಾಣ (ಕ್ರಿ.ಶ.1494):

ಸಕಲ ಕೀರ್ತಿಯ ಶಿಷ್ಯನಾದ ಜಿನದಾಸನು ಇದರ ಕರ್ತೃ. ಈ ಗ್ರಂಥದಲ್ಲಿ 39 ಸರ್ಗಗಳಿವೆ. ಇವುಗಳಲ್ಲಿ ಮೊದಲ 14 ಸರ್ಗಗಳು ಸಕಲ ಕೀರ್ತಿಯಿಂದಲೇ ರಚಿತವಾಯಿತೆಂದು ತಿಳಿಯುವುದಕ್ಕೆ ಆಧಾರವಿದೆ. ಆದರೆ ಈ ಆಧಾರವನ್ನು ಪ್ರಮಾಣವಾಗಿ ಗ್ರಹಿಸಲು ಸಾಧ್ಯವಿಲ್ಲವೆನ್ನುವುದಕ್ಕೆ ಅವಕಾಶವೂ ಇದೆ.(1)

### 3. ಹರಿವಂಶ ಪುರಾಣ (ಕ್ರಿ.ಶ. 1496):

ಶ್ರುತಕೀರ್ತಿ ಇದರ ಕರ್ತೃ. ಇದರಲ್ಲಿ ಒಟ್ಟು 44 ಸಂಧಿಗಳಿವೆ. ಸಂಧ್ಯಾಂತದಲ್ಲಿ ಈ ಗ್ರಂಥವನ್ನು ಮಹಾಕಾವ್ಯವೆಂದು ಕರೆದಿದೆ.

ಸಂಸ್ಕೃತದಲ್ಲಿ ಇನ್ನೂ ಹತ್ತಾರು 'ಹರಿವಂಶ' ಕೃತಿಗಳಿವೆ. ಅವುಗಳಲ್ಲಿ ಹಲವಾರು ಕೃತಿಗಳ ಕಾಲ ಇತ್ಯಾದಿ ವಿವರಗಳು ತಿಳಿದಿಲ್ಲ; ಮತ್ತೆ ಕೆಲವು ಕೃತಿಗಳು ಲಭ್ಯವಿಲ್ಲ. ಈಗ ದೊರೆತ ಸಂಸ್ಕೃತ ಕೃತಿಗಳಲ್ಲಿ ಮುಖ್ಯವಾದವು ಮೂರು ಎನ್ನಬಹುದು. ಇವುಗಳ ಪೈಕಿ ಕ್ರಿ.ಶ.783ರಲ್ಲಿ ಜಿನಸೇನಾಚಾರ್ಯರಿಂದ ರಚಿತವಾದ ಹರಿವಂಶ ಪುರಾಣ ಮೊದಲನೆಯದು.

## ಪ್ರಾಕೃತ ಹರಿವಂಶ ಪುರಾಣಗಳು:

### 1. ಹರಿವಂಶ ಪುರಾಣ: (ಕ್ರಿ.ಶ.ಸು.678 ರಿಂದ 783ರೊಳಗೆ):

ಈ ಕೃತಿ ಅಪಭ್ರಂಶದಲ್ಲಿದೆ. ಇದರಲ್ಲಿ 112 ಸಂಧಿಗಳೂ, 1937 ಕಡವಕಗಳೂ ಇವೆ. ಇದರ ಕರ್ತೃ ಚತುರ್ಮುಖ ಸ್ವಯಂಭು.

ಈ ಗ್ರಂಥದಲ್ಲಿ ಒಟ್ಟು 18000 ಶ್ಲೋಕಗಳಿದ್ದು, 4 ಕಾಂಡಗಳಿವೆ. ಅವುಗಳು ಯಾದವ, ಕುರು, ಯುದ್ಧ ಮತ್ತು ಉತ್ತರ ಕಾಂಡಗಳು. 'ಯಾದವ ಕಾಂಡ' ದಲ್ಲಿ ನೇಮಿಜನ್ಮ ವೃತ್ತಾಂತವು ಬಂದಿದೆ.

### 2. ಹರಿವಂಶ ಪುರಾಣ (ಕ್ರಿ.ಶ.10-11 ನೆಯ ಶತಾಬ್ದ):

ಈ ಗ್ರಂಥ ಕರ್ತೃ ಧವಲ. ಈ ಹರಿವಂಶ ಪುರಾಣದಲ್ಲಿ 122 ಸಂಧಿಗಳಿವೆ. ಸಂಧಿಗಳಲ್ಲಿಯ ಕಡವಕಗಳ ಸಂಖ್ಯೆ ನಿರ್ದಿಷ್ಟವಾಗಿ ತಿಳಿಯದು. ಸಂಧ್ಯಂತ್ಯದ ಘತ್ತಾದಲ್ಲಿ ಧವಲ ಶಬ್ದದ ಪ್ರಯೋಗವಿದೆ. ಹರಿವಂಶದ ಈ ಕಥೆಯನ್ನು ಹಿಂದೆ ಚತುರ್ಮುಖನು ಹೇಳಿದ್ದಾನೆಂಬುದಾಗಿ ತಿಳಿಸಿದ್ದಾನೆ.

### 3. ಹರಿವಂಶ ಪುರಾಣ (ಕ್ರಿ.ಶ.1443):

ಯಶಃ ಕೀರ್ತಿ ಇದರ ಕರ್ತೃ. ಈತನು 'ಪಾಂಡವ ಪುರಾಣ'ವನ್ನೂ ಬರೆದಿದ್ದಾನೆ. ನಯಗಾವ ನಗರದಲ್ಲಿ ಅಗ್ರವಾಲ ಕುಲೋತ್ಪನ್ನನಾದ ನೀಲಾ ಸಾಹುವಿನ ಪುತ್ರ 'ಹೇಮರಾಜ'ನ ಆಶಯದಂತೆ ಪಾಂಡವ ಪುರಾಣವನ್ನು ಬರೆದನಂತೆ. 'ಹರಿವಂಶ ಪುರಾಣ'ವನ್ನು ಜೋಗಿನೀಪುರದಲ್ಲಿ ಆಯರವಾಲ (ಅಗ್ರವಾಲ) ವಂಶದ ಮುಖ್ಯನಾದ ಗಗ್ಗ (ಗರ್ಗ)

ಗೋತ್ರೋತ್ಪನ್ನನಾದ ದಿಉಧಾ ಸಾಹುವಿನ ಪ್ರೇರಣೆಯಂತೆ ಬರೆದನು. ಇದರಲ್ಲಿ 13 ಸಂಧಿಗಳೂ 267 ಕಡವಕಗಳೂ ಇವೆ. ಕೃತಿಯ ರಚನೆಯಲ್ಲಿ ಪದ್ಧಡಿಯೂ ಇತರ ಛಂದಸ್ಸುಗಳೂ ಬಳಕೆಯಾಗಿವೆ.

**ಸಂಸ್ಕೃತ ತ್ರಿಷಷ್ಟಿ ಶಲಾಕ ಪುರುಷ ಚರಿತ್ರ:**

ಸಂಸ್ಕೃತ ತ್ರಿಷಷ್ಟಿ ಶಲಾಕ ಪುರುಷ ಚರಿತ್ರ ಹಲವಾರಿವೆ. ಅದರಲ್ಲಿ ಮುಖ್ಯವಾದುದು ಕವಿ ಪರಮೇಷ್ಠಿಯ ವಾಗರ್ಥ ಸಂಗ್ರಹ. ಇವನು ಕ್ರಿ.ಶ.9ನೆಯ ಶತಮಾನದ ಪೂರ್ವದಲ್ಲಿ ಪ್ರಸಿದ್ಧನಾಗಿದ್ದನೆಂದು ತಿಳಿಯುತ್ತದೆ. ಇವನು ರಚಿಸಿದ ಒಂದು ತ್ರಿಷಷ್ಟಿ ಶಲಾಕಪುರುಷ ಪುರಾಣ ಗದ್ಯ ಕಥೆಯು ಜಿನಸೇನರ ಆದಿಪುರಾಣಕ್ಕೆ ಮಾತೃಕೆಯಾಗಿತ್ತೆಂದು ತಿಳಿದು ಬರುತ್ತದೆ.

**4. ಮಹಾಪುರಾಣ (ಪೂರ್ವಪುರಾಣ ಮತ್ತು ಉತ್ತರ ಪುರಾಣ) (ಕಾಲ: ಕ್ರಿ.ಶ.838 – 858):**

ಸೇನೆ ಸಂಘದ ವೀರ ಸೇನರ ಶಿಷ್ಯ 'ಜಿನಸೇನರೂ' ಇವರ ಶಿಷ್ಯ ಗುಣಭದ್ರರೂ ಇದರ ಕರ್ತೃಗಳು. ಜಿನಸೇನರ ಪೂರ್ವಪುರಾಣದ ಅವಶಿಷ್ಟ ಭಾಗವನ್ನೂ ಉತ್ತರ ಪುರಾಣವನ್ನೂ ರಚಿಸಿದವರು ಗುಣಭದ್ರರು.

ಉತ್ತರ ಪುರಾಣದ 70. 71 ಮತ್ತು 72ನೆಯ ಪರ್ವಗಳಲ್ಲಿ ನೇಮಿನಾಥ ಚರಿತ್ರೆ ನಿರೂಪಿತವಾಗಿದೆ. "ಗ್ರಂಥದ ಗಾತ್ರವನ್ನೂ ಸತ್ವವನ್ನೂ ಸಾಧಕವಾದ ಸಂದರ್ಭಗಳು ವರ್ಣನೆಗಳು ರಸಭಾವಗಳು ಮುಂತಾದವೆಲ್ಲ ಕೂಡಿ ಬೆಳಸಲು ತಕ್ಕ ಅವಕಾಶವಿಲ್ಲದೆ ಇಲ್ಲಿಯ ಜಿನ ಚರಿತ್ರೆಗಳು ಕೇವಲ ಇತಿವೃತ್ತಾತ್ಮಕವೂ ನಿರಾಕರ್ಷಕವೂ ಆಗಿ ತೋರಿದರೆ. ಅದು ಸಹಜವೇ ಆಗಿದೆ"(2)

ಇದಕ್ಕೆ ನೇಮಿಸ್ವಾಮಿಯ ಚರಿತೆಯೂ ಹೊತರಲ್ಲ. ಆದರೆ ಗುಣಭದ್ರರ ನೇಮಿ ಚರಿತೆಗೆ ಹಾಕಿಕೊಟ್ಟಿರುವ ಪ್ರತ್ಯೇಕ ಕಥಾ ಸಂಪ್ರದಾಯದಿಂದ ಅದರ ವೈಶಿಷ್ಟ್ಯ ಮತ್ತು ಮಹತ್ವಗಳು ಎದ್ದು ಕಾಣುತ್ತವೆ. ಪುಷ್ಪದಂತ ಮೊದಲಾದ ಪ್ರಾಕೃತ ಕವಿಗಳ ಹಾಗೂ ಚಾವುಂಡರಾಯ ಮೊದಲಾದ ಕನ್ನಡ ಕವಿಗಳ ನೇಮಿ ಚರಿತೆಗಳು ಗುಣಭದ್ರರ ನೇಮಿಕಥಾ ಸಂಪ್ರದಾಯಕ್ಕೆ ಸೇರಿದವು.

**5. ತ್ರಿಷಷ್ಟಿ ಮಹಾಪುರಾಣ: (ಕ್ರಿ.ಶ. 1047):**

ಇದರ ಕರ್ತೃ ಮಲ್ಲಿಷೇಣನು. "ಇವನು ಸಂಸ್ಕೃತ ಪ್ರಾಕೃತೋಭಯ ಭಾಷೆಗಳಲ್ಲಿ ಸಮರ್ಥನೂ ಮಂತ್ರವಾದಿಯೂ ಪ್ರಸಿದ್ಧನೂ ಅಗಿದ್ದನು. ಮುಳಗುಂದದ

ಜಿನಾಲಯವೊಂದರಲ್ಲಿ ಇದ್ದುಕೊಂಡು ಈ ಕೃತಿಯನ್ನು ರಚಿಸಿದನು. ಇದರಲ್ಲಿ 2000 ಶ್ಲೋಕಗಳಿದ್ದು ರಚನೆ ಸುಂದರವೂ ಪ್ರಸಾದ ಗುಣಯುಕ್ತವೂ ಆಗಿದೆ.

**6. ತ್ರಿಷಷ್ಟಿ ಶಲಾಕಾ ಪುರುಷ ಚರಿತ್ರ (ಕ್ರಿ.ಶ.1049-1173):**

ಇದರ ಕರ್ತೃ ಗುಜರಾತಿನ ದೊರೆ ಕುಮಾರಪಾಲನ ಆಸ್ಥಾನ ಕವಿ ಹೇಮಚಂದ್ರ. ಈ ಗ್ರಂಥವು ಮಹಾಪುರಾಣಗಳ ಶ್ರೇಣಿಯಲ್ಲಿ ಗಣ್ಯವೂ ಸರ್ವ ರೀತಿಗಳಿಂದ ಸಮಗ್ರವೂ ಆಗಿದೆ. ಶ್ವೇತಾಂಬರ ಸಂಪ್ರದಾಯದ ಮಹಾಪುರಾಣಗಳ ಶ್ರೇಣಿಯಲ್ಲಿ ಶ್ರೇಷ್ಠಗ್ರಂಥವಾಗಿದೆ. ಕೃತಿಯಲ್ಲಿ ಒಟ್ಟು 11 ಪರ್ವಗಳಿದ್ದು 10 ಪರ್ವಗಳು ಕಥಾಸಂಬಂಧಿ ಪರ್ವಗಳು. 11ನೆಯ ಪರ್ವ ಪರಿಶಿಷ್ಟ ಪರ್ವವಾಗಿದೆ. 8ನೆಯ ಪರ್ವದ ವಿಷಯ ನೇಮಿನಾಥ ಚರಿತ್ರೆ. ಆದರೆ ಇಲ್ಲಿ ನೇಮಿನಾಥನ ಕಥೆಗಿಂತ ಕೃಷ್ಣನ ಕಥೆಗೆ ಹೆಚ್ಚು ಪ್ರಾಧಾನ್ಯತೆ ಕೊಡಲಾಗಿದೆ.

## ಪ್ರಾಕೃತ ತ್ರಿಷಷ್ಟಿ ಶಲಾಕಾ ಪುರುಷ ಚರಿತ್ರಗಳು:

**1. ಮಹಾಪುರುಷ ಚರಿತ (ಕ್ರಿ.ಶ.869) (ಚಉಪ್ಪನ್ನ ಮಹಾಪುರಿಸ ಚರಿಯ):**

ಶೀಲಾಂಕ ಅಥವಾ ಶೀಲಾಚಾರ್ಯನು ಈ ಗ್ರಂಥದ ಕರ್ತೃ. ಈ ಗ್ರಂಥವು ಗದ್ಯಪದ್ಯಾತ್ಮಕವಾದದ್ದು. ಪದ್ಯ ಪ್ರಮಾಣ 10,800. ಶೀಲಾಂಕನ ಗ್ರಂಥಗಳಲ್ಲಿ ಬರುವ ಮಹಾಪುರುಷರ ಚರಿತ್ರೆಯಲ್ಲಿ ನೇಮಿನಾಥನ ಕಥೆಯೂ ಕೃಷ್ಣ ಬಲದೇವರ ಕಥೆಯೂ 49, 50, 51ನೆಯ ಮಹಾಪುರುಷರ ಚರಿತ್ರೆಗಳಾಗಿ ಸಾಕಷ್ಟು ವಿಸ್ತಾರವಾಗಿಯೇ ನಿರೂಪಿತವಾಗಿವೆ. ಈ ಗ್ರಂಥದಲ್ಲಿ ನೇಮಿ ಕಥೆಯನ್ನು ಗದ್ಯ ಭಾಗದೊಡನೆ 305 ಪದ್ಯಗಳಲ್ಲಿ ಹೇಳಲಾಗಿದೆ.

**2. ತಿಸಟ್ಠಿ ಮಹಾಪುರಿಸ ಗುಣಾಲಂಕಾರಂ (ಮಹಾಪುರಾಣ) (ಕಾಲ: ಕ್ರಿ.ಶ. 959 – 965)**

ಈ ಗ್ರಂಥದ ಕರ್ತೃ ಪುಷ್ಪದಂತ. 'ಮಹಾಪುರಾಣವು' ಪುಷ್ಪದಂತನ ಕೃತಿಗಳಲ್ಲಿಯೇ ಅತಿ ದೊಡ್ಡ ಗ್ರಂಥ. ಇದರಲ್ಲಿ ಒಟ್ಟು ಮೂರು ಖಂಡಗಳಿದ್ದು ಒಟ್ಟು 102 ಸಂಧಿಗಳಿವೆ. 81ರಿಂದ 92ನೆಯ ಸಂಧಿಗಳವರೆಗೆ ನೇಮಿನಾಥನ ಚರಿತೆಯನ್ನು ಹೇಳಿದೆ. ನೇಮಿನಾಥನ ಚರಿತೆ ಒಂದು ಪ್ರಮುಖವೂ ವಿಸ್ತೃತ ಭಾಗವೂ ಆಗಿದೆ. ಕಥಾವಸ್ತು, ಕಥಾನುಪೂರ್ವಿ, ಸಂವಿಧಾನ ರಚನೆ, ಅಂಕಿತನಾಮ, ಸಾಮ್ಯಗಳನ್ನು ನೋಡಿದರೆ ಇವನು ಜಿನಸೇನ – ಗುಣಭದ್ರರನ್ನು ಅನುಸರಿಸಿದ್ದಾನೆ ಎಂಬುದು ತಿಳಿಯುತ್ತದೆ.

3. ಚಉಪ್ಪನ್ನ ಮಹಾಪುರಿಸ ಚರಿಯ (ಕಾಲ: ...)

ಈ ಗ್ರಂಥದ ಕರ್ತೃ ಆಮ್ರನೆಂಬುವನು. ಈ ಕೃತಿಯು ಪ್ರಾಕೃತ ಭಾಷೆಯಲ್ಲಿದೆ. ಇದು ಆರ್ಯಾ ಛಂದಸ್ಸಿನಲ್ಲಿದ್ದು 103 ಅಧಿಕಾರಗಳಿಂದ ಕೂಡಿದೆ. ಒಟ್ಟು 10,050 ಶ್ಲೋಕಗಳಿದ್ದು, ಅವುಗಳಲ್ಲಿ 8735 ಗಾಥೆಗಳಾಗಿಯೂ 100 ಇತರ ವೃತ್ತಗಳಾಗಿಯೂ ಇವೆ. 54 ಮಹಾಪುರುಷರ ಚರಿತ್ರೆಯ ಕೊನೆಗೆ ಇರುವ 9 ಜನ ಪ್ರತಿವಾಸುದೇವರ ಚರಿತ್ರೆಯೂ ಸೇರಿ 63 ಶಲಾಕಾ ಪುರುಷರ ಚರಿತ್ರೆಯಾಗುತ್ತದೆ ಎಂದು ಉಪಸಂಹಾರದಲ್ಲಿ ಹೇಳಿದೆ.

ಈ ಎಲ್ಲ ಗ್ರಂಥಗಳಲ್ಲದೆ 'ಕುರುವಂಶೋಪಾಖ್ಯಾನ ಕಥೆ'ಗಳಲ್ಲಿಯೂ, 'ಹರಿವಂಶೋಪಾಖ್ಯಾನ ಕಥೆಗಳಲ್ಲಿಯೂ, ಜೈನಾಗಮ ಗ್ರಂಥಗಳಲ್ಲಿಯೂ ಪ್ರಾಸಂಗಿಕವಾಗಿ ನೇಮಿನಾಥನ ಚರಿತ್ರೆಯ ಪ್ರಸ್ತಾಪವಿದೆ.

## ಆ. ಕನ್ನಡ ನೇಮಿನಾಥ ಪುರಾಣಗಳ ಒಂದು ಕಿರುನೋಟ

ಸಂಸ್ಕೃತ-ಪ್ರಾಕೃತ ಭಾಷೆಗಳಲ್ಲಿ ಅನೇಕ 'ನೇಮಿನಾಥ ಚರಿತ್ರ'ಗಳಿರುವಂತೆ ಕನ್ನಡ ಭಾಷೆಯಲ್ಲಿಯೂ ಅನೇಕ 'ನೇಮಿನಾಥಚರಿತ್ರೆ'ಗಳಿವೆ. ಇಪ್ಪತ್ತೆರಡನೆಯ ತೀರ್ಥಂಕರನಾದ 'ನೇಮಿನಾಥ'ನ ಬಗೆಗೆ ಬಹು ಸಂಖ್ಯೆಯಲ್ಲಿ ಗ್ರಂಥಗಳು ರಚನೆಯಾಗಲು ಕಾರಣ: ಇದರ ಪಠಣದಿಂದ ಶ್ರೇಯಸ್ಸಾಗುವುದೆಂಬ ನಂಬಿಕೆ [3] ನೇಮಿನಾಥನನ್ನು ಕೇವಲ ಪುರಾಣ ಪುರುಷನನ್ನಾಗಿ ನೋಡದೆ [4] ಐತಿಹಾಸಿಕ ಪುರುಷನೆಂದು ಇತಿಹಾಸದ ಪುಟಗಳು ಹೇಳುತ್ತವೆ. ಅವನ ಕಾಲದಲ್ಲಿಯೇ ಮಹಾಭಾರತದ ಘಟನೆಗಳು ನಡೆಯಿತೆಂದು ಐತಿಹಾಸಿಕ ಸಂಶೋಧನೆಗಳು ಧೃಢಪಡಿಸುತ್ತವೆ.

ಜೈನ ಸಂಪ್ರದಾಯದಂತೆ ರಚಿತವಾದ ಗ್ರಂಥಗಳಲ್ಲಿ ನೇಮಿನಾಥನದೇ ಪ್ರಮುಖ ಸ್ಥಾನ. ನೇಮಿನಾಥ, ವಸುದೇವ, ಕೃಷ್ಣ, ಪ್ರದ್ಯುಮ್ನ, ಕಂಸ, ಜರಾಸಂಧ ಮೊದಲಾದವರು ಹರಿವಂಶಕ್ಕೆ ಸೇರಿದವರಾಗಿದ್ದರು. ಆದ್ದರಿಂದ ನೇಮಿಕಥೆಯು 'ಹರಿವಂಶಪುರಾಣ'ವೆಂಬ ಹೆಸರಿನಿಂದ ಕರೆಯಲ್ಪಟ್ಟಿತು.

ಕನ್ನಡದಲ್ಲಿ ಒಂಬತ್ತು ನೇಮಿನಾಥ ಪುರಾಣಗಳಿರುವುದು ಖಚಿತವಾಗಿದೆ. ಇದಲ್ಲದೆ, ಇನ್ನೊಂದು ನೇಮಿನಾಥ ಪುರಾಣವು ಇದೆಯೆಂಬ ಉಲ್ಲೇಖವಿದೆ [5]. ಇವುಗಳಲ್ಲಿ ಕೆಲವು ಹರಿವಂಶದ ಒಂದು ಭಾಗವಾಗಿ ಬಂದರೆ, ಇನ್ನು ಕೆಲವು ಪೂರ್ಣವಾಗಿ

ನೇಮಿನಾಥಪುರಾಣಗಳೇ ಆಗಿವೆ. ಗುಣವರ್ಮನ ಹರಿವಂಶದ ಒಂದು ಭಾಗವಾಗಿ ನೇಮಿನಾಥಪುರಾಣದ ರಚನೆಯಾಗಿದೆ. ಬಂಧುವರ್ಮನ ನೇಮಿನಾಥಪುರಾಣವು 'ಹರಿವಂಶಾಭ್ಯುದಯ'ವೆಂದೂ ಸಾಳ್ವ ಕವಿಯ ನೇಮಿನಾಥಪುರಾಣವು 'ಸಾಳ್ವ ಭಾರತ'ವೆಂದೂ ಪ್ರಸಿದ್ಧವಾಗಿವೆ. ಇವುಗಳಲ್ಲದೆ 'ಕರ್ಣಪಾರ್ಯನ ನೇಮಿನಾಥಪುರಾಣ', ಮೂರನೇ ಮಂಗರಸನ 'ನೇಮಿಜಿನೇಶ ಸಂಗತಿ' [6] ಮಹಾಬಲನ ನೇಮಿನಾಥಪುರಾಣ, ಬ್ರಹ್ಮಣಾಂಕನ 'ನೇಮಿನಾಥ ಚರಿತೆ'ಗಳು ನೇಮಿನಾಥನ ಹೆಸರಿನಲ್ಲೇ ಇದೆ.

## (1) ನೇಮಿನಾಥ ಪುರಾಣ – ಕವಿ: ನೇಮಿಚಂದ್ರ.

ಕವಿ ನೇಮಿಚಂದ್ರನು 12ನೆಯ ಶತಮಾನಕ್ಕೆ ಸೇರಿದವನು. ಇವನೂ ಸಹ ಪೂರ್ವ ಜೈನ ಕವಿಗಳಂತೆ ಒಂದು ಲೌಕಿಕ ಗ್ರಂಥವನ್ನೂ ಒಂದು ಧಾರ್ಮಿಕ ಗ್ರಂಥವನ್ನೂ ಬರೆದಿದ್ದಾನೆ. ಡಾ. ವೆಂಕಟಸುಬ್ಬಯ್ಯನವರ ಪ್ರಕಾರ [7] 1190ಕ್ಕೆ ಮೊದಲು ರಟ್ಟವಂಶದ ಲಕ್ಷ್ಮಣರಾಜನ ಆಶ್ರಯದಲ್ಲಿದ್ದಾಗ ಲೀಲಾವತಿಯನ್ನೂ ವೀರ ಬಲ್ಲಾಳನ ಸಜ್ಜೆವಳ್ಳ ಪದ್ಮನಾಭನ ಆಶ್ರಯದಲ್ಲಿ ನೇಮಿನಾಥ ಪುರಾಣವೆಂಬ ಧಾರ್ಮಿಕ ಗ್ರಂಥವನ್ನೂ ರಚಿಸಿರಬಹುದು ಎಂದು ಊಹಿಸಬಹುದು ಎಂದು ಎನ್. ಅನಂತರಂಗಾಚಾರ್ ಹೇಳುತ್ತಾರೆ.

ಚತುರ್ಭಾಷಾ ಪಂಡಿತನಾದ ನೇಮಿಚಂದ್ರನು ಕನ್ನಡ ಕವಿಗಳಲ್ಲಿ ಯಾರನ್ನೂ ಸ್ಮರಿಸಿಲ್ಲ. ಪಂಪ, ರನ್ನರಂತೆ ಇವನೂ ಸಹ ಸ್ವವಿಚಾರಗಳನ್ನು ಹೇಳಿಕೊಂಡಿಲ್ಲ.

ನೇಮಿಚಂದ್ರನ ನೇಮಿನಾಥ ಪುರಾಣ ಸಹ ಹರಿವಂಶ, ಕುರುವಂಶ, ಭಾಗವತದ ಕಥೆಗಳನ್ನು ಒಳಗೊಂಡದ್ದಾಗಿದೆ. ಆದರೆ, ಈ ಕಾವ್ಯವು ಕಂಸವಧೆಯೊಂದಿಗೆ ಅರ್ಧಕಥೆಯಲ್ಲಿ ಮುಗಿಯುತ್ತದೆ. ಆದ್ದರಿಂದ ಇದನ್ನು 'ಅರ್ಧ ನೇಮಿಪುರಾಣ' ಎಂದೂ ಕರೆಯುತ್ತಾರೆ. ಇಲ್ಲಿ ನೇಮಿನಾಥನ ಪೂರ್ವ ಭವಾವಳಿಗಳನ್ನು ಹೇಳಿದ್ದರೂ ನೇಮಿನಾಥನ ವೈರಾಗ್ಯ ಪ್ರಸಂಗ ಬರುವುದಿಲ್ಲ.

## (2) ಮಂಗರಸನ ನೇಮಿಜಿನೇಶ ಸಂಗತಿ:

ಮಂಗರಸ ಎಂಬ ಹೆಸರಿನ ಕವಿಗಳು ಮೂರು ಜನ. ಮೊದಲನೆಯ ಮಂಗರಸ (1352) ಹೊಯ್ಸಳ ದೇಶದ ದೇವಳಿಗೆಯ ನಾಡಿನ ಮೂಗುಳಿಪುರದ ದೊರೆ. ಈತನು ಖಗೇಂದ್ರಮಣಿದರ್ಪಣವೆಂಬ ವಿಷವೈದ್ಯಗ್ರಂಥವನ್ನು ಬರೆದಿದ್ದಾನೆ.

ಎರಡನೆಯ ಮಂಗರಸ 1398ರಲ್ಲಿ ಮಂಗರಾಜ ನಿಘಂಟೆಂಬ ಗ್ರಂಥವನ್ನು ಬರೆದಿದ್ದಾನೆ.

ಮೂರನೆಯ ಮಂಗರಸನೇ 'ನೇಮಿಜಿನೇಶ ಸಂಗತಿ'ಯ ಕರ್ತೃ. ಈತನ ತಂದೆ ವಿಜಯರಾಜ. ತಾಯಿ ಪದ್ಮಾಜಮ್ಮಣ್ಣಿ. ಮೂರನೆಯ ಮಂಗರಸನ ಬಗೆಗೆ ವಿಶೇಷ ವಿಷಯಗಳು ಶಾಲಿವಾಹನ ಶಕ 1535ರ ಒಂದು ಶಾಸನದಿಂದ ತಿಳಿಯುತ್ತದೆ. ಮಂಗರಸ ಕವಿಯು ಚಂಗಳರಾಜರ ಸಚಿವ ಕುಲದಲ್ಲಿ ಹುಟ್ಟಿ ಹೊಯ್ಸಳದೇಶದ ಹೊಸವೃತ್ತಿಯ ನಾಡಿನ ಧಾತುಪುರದರಸನಾಗಿದ್ದನು. 'ಧಾತುಪುರ' ಎನ್ನುವುದು ಕಲ್ಲಹಳ್ಳಿ ಗ್ರಾಮದ ಮೊದಲಿನ ಹೆಸರು. ಇದು ಹುಣಸೂರು ತಾಲ್ಲೂಕು ಚಿಲಕುಂದ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಇವನ ಕಾಲವನ್ನು 1508 ಎಂದು ಹೇಳಲಾಗಿದೆ [8].

ಮೂರನೇ ಮಂಗರಸನು ತನ್ನ ಸಮ್ಯಕ್ತ್ವ ಕೌಮುದಿಯಲ್ಲಿ [9] "ತನ್ನ ವಂಶದಲ್ಲಿ ಅಗ್ರಗಣ್ಯನೆಂದೂ, ದಾನಶೂರನೂ, ಮಹಾಸುಂದರನೂ, ಸಕಲ ಕಲಾನಿಪುಣನೆಂದೂ, ಉತ್ತಮ ಗುಣವಂತನೆಂದೂ, ನಿಷ್ಕಳಂಕ ಚರಿತನೆಂದೂ, ಮಹಾದೈವಭಕ್ತನೆಂದೂ, ಧೀರವೀರನೆಂದೂ, ತನ್ನನ್ನು ಕುರಿತು ಸ್ವಾಭಿಮಾನದಿಂದಲೂ, ಆತ್ಮವಿಶ್ವಾಸದಿಂದಲೂ ಹೇಳಿಕೊಂಡಿದ್ದಾನೆ.

ಮೈಸೂರು ಸಂಸ್ಥಾನದ ಅರಸು ಮನೆತನಗಳಲ್ಲಿ, ಕೆಲವು ಜೈನ ಸಂಪ್ರದಾಯದ ಮನೆತನಗಳೂ, ಕೆಲವು ವೈಷ್ಣವ ಸಂಪ್ರದಾಯದ ಮನೆತನಗಳೂ, ಕೆಲವು ಶೈವ ಸಂಪ್ರದಾಯದ ಮನೆತನಗಳೂ ಇದ್ದವು. ಈ ಮೂರು ಸಂಪ್ರದಾಯಗಳಲ್ಲಿ ಮಂಗರಸ ಕವಿಯು ಜೈನಮತಕ್ಕೆ ಸೇರಿದವನು.

ಮಂಗರಸನ ನೇಮಿಜಿನೇಶ ಸಂಗತಿ (ಹರಿವಂಶ ಪುರಾಣ) (2) ರಾಮನ ಸಂಗೀತ (3) ಪ್ರಭಂಜನ ಚರಿತ (4) ಶ್ರೀಪಾಲ ಚರಿತೆ, (5) ಜಯನೃಪ ಕಾವ್ಯ (6) ಸಮ್ಯಕ್ತ್ವ ಕೌಮುದಿ (7) ಸೂಪ ಶಾಸ್ತ್ರ ಎಂಬ ಗ್ರಂಥಗಳನ್ನು ಬರೆದಿದ್ದಾನೆ ಎಂದು ತಿಳಿದು ಬಂದಿದೆ. ಆದರೆ ಇವುಗಳಲ್ಲಿ (1) ಜಯನೃಪ ಕಾವ್ಯ (2) ಸಮ್ಯಕ್ತ್ವ ಕೌಮುದಿ (3) ನೇಮಿಜಿನೇಶ ಸಂಗತಿ ಹಾಗೂ (4) ಸೂಪಶಾಸ್ತ್ರದ ಪುಸ್ತಕಗಳು ಮಾತ್ರ ಲಭ್ಯವಾಗಿವೆ.

## ನೇಮಿ ಜಿನೇಶ ಸಂಗತಿ

ಮೂರನೆ ಮಂಗರಸ ಕವಿಯ ನೇಮಿಜಿನೇಶ ಸಂಗತಿಯು 35 ಸಂಧಿಗಳು – 5035 ಪದ್ಯಗಳಿಂದ ಕೂಡಿದೆ. ಇದು ಹರಿವಂಶವೆಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ಇದು ಸಾಂಗತ್ಯ ಛಂದಸ್ಸಿನಲ್ಲಿ ರಚಿತವಾಗಿದೆ. ಮಂಗರಸನ ರಚನೆಗಳಲ್ಲೆಲ್ಲಾ ಇದೇ ದೊಡ್ಡದು. ಸಾಂಗತ್ಯದ ಛಂದಸ್ಸಿನಲ್ಲಿ [10] ರತ್ನಾಕರನ ಭರತೇಶ ವೈಭವ, ಪಾಯಣವರ್ಣಿಯ ಜ್ಞಾನಚಂದ್ರ ಚರಿತೆ, ನಂಜುಂಡ ಕವಿಯ ಕುಮಾರರಾಮ ಚರಿತೆಗಳನ್ನು ಬಿಟ್ಟರೆ ಮೂರನೇ ಮಂಗರಸನ ನೇಮಿಜಿನೇಶ ಸಂಗತಿಯೇ ದೊಡ್ಡ ಕಾವ್ಯ.

ಈ ಕಾವ್ಯದಲ್ಲಿಯೂ ಎಲ್ಲ ನೇಮಿ ಪುರಾಣಗಳಂತೆಯೇ ಮಹಾಭಾರತದ ಹರಿವಂಶದ ಕಥೆಯೂ, ಕುರುವಂಶದ ಕಥೆಯೂ, ನೇಮಿ ಕಥೆಯೂ ಬರುತ್ತದೆ. ವೈದಿಕ ಭಾರತದಲ್ಲಿ ಶ್ರೀ ಕೃಷ್ಣನಿಗೆ ಅಗ್ರಸ್ಥಾನವಾದರೆ, ಈ ಹರಿವಂಶದ ಕಥೆಯಲ್ಲಿ ಕೃಷ್ಣನು ನೇಮಿನಾಥನಿಗೆ ಎರಗುತ್ತಾನೆ [11]. ಶ್ರೀ ಕೃಷ್ಣನು ಕೂಡ ನಿರ್ಮಲನೆಂಬ ಹೆಸರಿನಿಂದ 16ನೆಯ ತೀರ್ಥಂಕರನಾಗಿ ಹುಟ್ಟುತ್ತಾನೆ.

ವ್ಯಾಸಭಾರತಕ್ಕೆ ಹೋಲಿಸಿದರೆ ಈ ಕಾವ್ಯದಲ್ಲಿ ಹಲವಾರು ಮಾರ್ಪಾಟುಗಳು ಕಾಣಿಸುತ್ತವೆ: (1) ಧರ್ಮರಾಯನಿಗೆ ಕುಸುಮಮಾಲಾ ಎಂಬ ಹೆಂಡತಿಯಿದ್ದಳು. (2) ಭೀಮನಿಗೆ ಸುಕೇಶಿ (ಹಿಡಿಂಬೆ) ಎಂಬ ಹೆಂಡತಿಯಿದ್ದಳು. (3) ದ್ರೌಪದಿ ಅರ್ಜುನನೊಬ್ಬನಿಗೇ ಮಡದಿ (4) ಜರಾಸಂಧ ಒಬ್ಬ ದೊಡ್ಡ ಚಕ್ರವರ್ತಿ. (5) ಕರ್ಣನಿಗೆ ರಣರಂಗದಲ್ಲಿ ಮರಣವಿಲ್ಲ. ಆತ ಸುದರ್ಶನ ವನಕ್ಕೆ ಹೋಗಿ 'ದಮವರ'ನೆಂಬ ಯತಿಯಿಂದ ದೀಕ್ಷೆ ಪಡೆದು ಸತ್ತು ದೇವನಾಗುತ್ತಾನೆ. (6) ಕರ್ಣನು ತನಗೆ 'ಜ್ವಾಲಾಮಾಲಿನಿ' ಎಂಬ ಯಕ್ಷ ಇತ್ತಿದ್ದ [12] 'ಅಗ್ನಿ ವಸ್ತ್ರ'ದಿಂದ ಪರೀಕ್ಷಿಸಿ ತನ್ನ ತಾಯಿ ಕುಂತಿಯೇ ಎಂಬುದನ್ನು ಮನವರಿಕೆ ಮಾಡಿಕೊಳ್ಳುತ್ತಾನೆ. (7) ಕರ್ಣನು ಕುಂತಿ ಪಾಂಡುವಿನ ದೈಹಿಕ ಸಂಬಂಧದಿಂದ ಹುಟ್ಟುತ್ತಾನೆಯೇ ಹೊರತು ಮಂತ್ರ ಪಠಣದಿಂದಲ್ಲ.

ಹೀಗೆ ಹಲವು ವ್ಯತ್ಯಾಸಗಳ ಜತೆಗೆ ಕೆಲವು ಹೊಸ ಕಥೆಗಳೂ ಸೇರಿಕೊಂಡು ಮಂಗರಸನ ನೇಮಿಜಿನೇಶ ಸಂಗತಿ ಸ್ವಾರಸ್ಯವಾಗಿ ಬೆಳೆದಿದೆ. ಈತನು ಕರ್ಣಪಾರ್ಯನನ್ನು ಅನುಸರಿಸಿರುವುದು ಕಂಡುಬರುತ್ತದೆ.

ನೇಮಿಜಿನೇಶ ಸಂಗತಿ ಕಾವ್ಯ ಮಂಗರಸ ಕವಿಯ ಸಮಸ್ತ ಕಾವ್ಯ ಸಾಮರ್ಥ್ಯವನ್ನು ಒಳಗೊಂಡು ರಚಿತವಾಗದೆ ಎಂದು [13] ಡಾ. ಹಂಪನಾಗರಾಜಯ್ಯನವರು ಹೇಳಿದ್ದಾರೆ.

## (3) ಬಂಧು ವರ್ಮನ ಹರಿವಂಶಾಭ್ಯುದಯ:

ಬಂಧುವರ್ಮನು 'ಹರಿವಂಶ' ಮತ್ತು 'ಜೀವಸಂಬೋಧನೆ' ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಆದರೆ ಸ್ವವಿಚಾರಗಳನ್ನು ಕವಿಯು ಎಲ್ಲಿಯೂ ಹೇಳಿಕೊಂಡಿಲ್ಲ. ತನ್ನ ಗುರುಪರಂಪರೆಯನ್ನಾಗಲೀ ಪೂರ್ವಕವಿಗಳನ್ನಾಗಲೀ ನೆನೆದಿಲ್ಲ. ಆದರೆ ಪುಣ್ಯಾಸ್ರವದ ನಾಗರಾಜ ಹಾಗೂ ಮೂರನೇ ಮಂಗರಸರನು ಬಂಧುವರ್ಮನನ್ನು ಹೊಗಳಿದ್ದಾರೆ. ಇವನ ಕಾಲ 1200 ಇರಬಹುದೆಂದು ಕರ್ಣಾಟಕ ಕವಿಚರಿತೆಕಾರರಾದ ರಾ.ನರಸಿಂಹಾಚಾರ್ ಊಹಿಸುತ್ತಾರೆ.

'ಹರಿವಂಶಾಭ್ಯುದಯ' ಎಂಬ ಹೆಸರಿನಿಂದ ಸಂಸ್ಕೃತ-ಪ್ರಾಕೃತದಲ್ಲಾಗಲೀ ಕನ್ನಡದಲ್ಲಾಗಲೀ ನೇಮಿಚರಿತ್ರೆಗಳು ರಚಿತವಾಗಿಲ್ಲ. ಬಂಧುವರ್ಮನು ತನ್ನ ನೇಮಿಚರಿತ್ರೆಯನ್ನು 'ಹರಿವಂಶಾಭ್ಯುದಯ' ಎಂದು ಹೆಸರಿಸಿರುವುದರಲ್ಲೇ ನಾವೀನ್ಯತೆಯಿದೆ. ಇದೊಂದು ಚಂಪೂಕೃತಿಯಾಗಿದೆ. ಗೌತಮಗಣಧರ ಮತ್ತು ಮಹಾವೀರರ ಪ್ರಶ್ನೋತ್ತರ ಮೂಲಕವಾಗಿ ಕೃತಿಯ ಆರಂಭವಾಗಿದೆ. ಬಂಧುವರ್ಮನು ಜಿನಸೇನಾಚಾರ್ಯರ ಹರಿವಂಶ ಪುರಾಣವನ್ನು ಕರ್ಣಪಾರ್ಯನ ಹಾಗೂ ನೇಮಿಚಂದ್ರನ ನೇಮಿನಾಥ ಪುರಾಣಗಳನ್ನು ಪರಿಶೀಲಿಸಿ ಉಪಯೋಗಿಸಿಕೊಂಡಿರುವ ಸಾಧ್ಯತೆ ಇದೆ ಎಂದು ಡಾ. ಟಿ.ವಿ.ವೆಂಕಟಾಚಲ ಶಾಸ್ತ್ರಿಗಳು ಹೇಳುತ್ತಾರೆ.

ಹರಿವಂಶಾಭ್ಯುದಯದಲ್ಲಿ 14 ಆಶ್ವಾಸಗಳಿವೆ. ಕುಮಾರೋದಯ ವರ್ಣನದಿಂದ ಆರಂಭವಾಗಿ ಕೃಷ್ಣನ ಮರಣ ಹಾಗೂ ನೇಮಿ ಭಟ್ಟಾರಕರ ಮುಕ್ತಿಯೊಂದಿಗೆ ಕಾವ್ಯ ಮುಕ್ತಾಯವಾಗುತ್ತದೆ.

## (4) ನೇಮಿನಾಥ ಪುರಾಣಂ: ಕವಿ ಕರ್ಣಪಾರ್ಯ

ಕರ್ಣಪಾರ್ಯ ಎಂಬ ಹೆಸರಿನ ಕವಿಗಳು ನಾಲ್ವರಿದ್ದಾರೆ. ಇವರಲ್ಲಿ ಇಬ್ಬರು ಪ್ರಮುಖರು: (1) ಮಾಳವೀಮಾಧವದ ಕರ್ತೃ ಒಬ್ಬ (2) ಇನ್ನೊಬ್ಬ ವೀರೇಶ ಚರಿತೆ ಮತ್ತು ನೇಮಿನಾಥ ಪುರಾಣದ ಕರ್ತೃವಾದ ಕರ್ಣಪಾರ್ಯ. ಇವನ ಕಾಲವನ್ನು ಸುಮಾರು 1165 ಎಂದು ಊಹಿಸುತ್ತಾರೆ.

ಕರ್ಣಪಾರ್ಯನ ಕಾವ್ಯವು ಪ್ರಾಚೀನ ಕಾವ್ಯ ಪ್ರಯೋಗಗಳನ್ನು ಅನುಸರಿಸಿದೆ.

ಈ ಕಾವ್ಯದ ಪ್ರತಿ ಆಶ್ವಾಸವೂ ಒಂದು ವೃತ್ತ ಪಾದದಿಂದ ಮುಗಿಯುತ್ತದೆ ಮತ್ತು ಇದರ ಕಡೆಯ ಸಾಲು "ಪರಮಜಿನಮತ ಕ್ಷೀರವಾರಾಶಿ ಚಂದ್ರಂ" ಎಂಬ ಪದ ಪುಂಜದಿಂದ ಕೂಡಿರುತ್ತದೆ. ಇದು ನೇಮಿನಾಥ ತೀರ್ಥಂಕರನಿಗೆ ಕವಿಯು ಬಳಸಿರುವ ವಿಶೇಷಣ. ಇವನ ಕಾವ್ಯದಲ್ಲಿ ಸಂಸ್ಕೃತ ಮತ್ತು ಕನ್ನಡ ಶಬ್ದಗಳು ಸಮಸಮವಾಗಿ ಹೊಂದಿಕೊಂಡು ಸಾಗುವ ಭಾಗಗಳು ಸಾಕಷ್ಟಿವೆ. ಹಿತವಾದ ಶಬ್ದಜೋಡಣೆ, ಒಳ್ಳೆಯ ಕಾವ್ಯಬಂಧ, ಶೈಲಿ, ಶಯ್ಯೆಗೆ ಇವನ ಕಾವ್ಯವು ಉದಾಹರಣೆಯಾಗಿದೆ.

## 5. ಸಾಳ್ವ ಭಾರತದ ಭಾಗವಾದ ನೇಮಿನಾಥ ಪುರಾಣ.

ಕನ್ನಡ ಚಂಪೂ ಪ್ರಕಾರದಲ್ಲಿ ಕಾಣಿಸಿಕೊಂಡ ನೇಮಿನಾಥ ಪುರಾಣವು ಮಧ್ಯ ಯುಗೀನ ಕಾಲದಲ್ಲಿ ಸಾಳ್ವ, ಮೂರನೆಯ ಮಂಗರಸ, ಬ್ರಹ್ಮಣಾಂಕನಲ್ಲಿ ವರ್ಣಕ ಕಾವ್ಯಗಳಾಗಿ ಕಾಣಿಸಿಕೊಂಡಿವೆ. ಹಾಗೆಯೇ ಜನಪದ ಸಾಹಿತ್ಯದಲ್ಲಿ ಕಥನ ಗೀತಗಳ ಹಾಗೂ ಬಿಡಿ ಹಾಡುಗಳ ರೂಪದಲ್ಲಿ ಕಾಣಿಸಿಕೊಂಡಿದೆ. ಇವುಗಳಲ್ಲಿ ಸಾಳ್ವಭಾರತ ಎಂದು ಜನಪ್ರಿಯವಾಗಿರುವ 'ನೇಮಿನಾಥ ಚರಿತೆ' ಹದಿನೈದನೆಯ ಶತಮಾನದ [14] ಮಧ್ಯಯುಗೀನ ಕನ್ನಡ ಸಾಹಿತ್ಯದ ಜನಮುಖಿ, ರಸಮುಖಿ ಮತ್ತು ಭಕ್ತಮುಖಿ ಧಾರೆಗೆ ಅನುಗುಣವಾಗಿದೆ.

ಸಾಳುವ ವಂಶಜರು ಕನ್ನಡ ಸಾಹಿತ್ಯ, ಸಂಸ್ಕೃತಿ ಹಾಗೂ ವಿಶೇಷವಾಗಿ ಜೈನ ಧರ್ಮಕ್ಕೆ ಮಹತ್ತರ ಸೇವೆ ಸಲ್ಲಿಸಿದ್ದಾರೆ. ಇಂತಹ ಸಾಳುವ ವಂಶಕ್ಕೆ ಸೇರಿದವನು ಸಾಳ್ವ ಕವಿ. ಎಲ್ಲ ಪ್ರಾಚೀನ ಕವಿಗಳಂತೆಯೇ ಸಾಳ್ವ ಕವಿಯೂ ತನ್ನ ಗ್ರಂಥಗಳಲ್ಲಿ ಕೃತಿರಚನೆಯ ಕಾಲವನ್ನು ಸೂಚಿಸಿಲ್ಲ. ಕವಿಚರಿತೆಕಾರರು ಇವನ ಕಾಲವನ್ನು 1559 [15] ಎಂದು ತಿಳಿಸಿದ್ದಾರೆ.

ಸಾಳ್ವ ಕವಿಯು 'ನೇಮಿನಾಥ ಚರಿತೆ' (ಸಾಳ್ವ ಭಾರತ), ರಸರತ್ನಾಕರಂ, ಶಾರದಾವಿಲಾಸಂ ಮತ್ತು ವೈದ್ಯ ಸಾಂಗತ್ಯ ಎಂಬ ನಾಲ್ಕು ಕೃತಿಗಳನ್ನು ರಚಿಸಿದ್ದಾನೆ. ನೇಮಿನಾಥನನ್ನು ಕುರಿತ ವರ್ಣಕ ಕಾವ್ಯಗಳಲ್ಲಿ ಸಾಳ್ವ ಕವಿಯ 1485ರ ಸಾಳ್ವ ಭಾರತವೇ ಮೊದಲನೆಯದು. ಅನಂತರ 3ನೇ ಮಂಗರಸನು ಸಾಂಗತ್ಯದಲ್ಲಿ 'ನೇಮಿಜಿನೇಶ ಸಂಗತಿ'ಯನ್ನು ರಚಿಸಿದರೆ, ಬ್ರಹ್ಮಣಾಂಕನು (ಚಂದ್ರಸಾಗರವರ್ಣಿಯು) ಸುಮಾರು ಕ್ರಿ.ಶ.1800ರಲ್ಲಿ 'ಜಿನಭಾರತವನ್ನು ಬರೆದಿದ್ದಾನೆ.

'ನೇಮಿನಾಥ ಚರಿತೆ'ಯಲ್ಲಿ ಸಾಳ್ವ ಬಳಸುವ ಛಂದೋಬಂಧಗಳು ಪೂರ್ಣವಾಗಿ ದೇಸೀಬಂಧಗಳಾಗಿವೆ. ಷಟ್ಪದಿ ಛಂದಸ್ಸಿನಲ್ಲಿರುವ ಈ ಕಾವ್ಯದಲ್ಲಿ ಬಹುತೇಕ ಕಾವ್ಯಭಾಗ ಭಾಮಿನಿ ಷಟ್ಪದಿಯೂ ಉಳಿದ ಕೆಲವು ಭಾಗ ವಾರ್ಧಕ ಹಾಗೂ ಪರಿವರ್ಧಿನಿ ಷಟ್ಪದಿಗಳಲ್ಲಿಯೂ ರಚನೆಯಾಗಿದೆ.

ಸಾಳ್ವನ ನೇಮಿನಾಥ ಚರಿತೆಯಲ್ಲಿ ಚಾಣೂರನು [16] ತನ್ನೊಡೆಯನಿಗೆ "ಬಾಲ ಕೃಷ್ಣನನ್ನು ಮುಗಿಸಿಬಿಡುತ್ತೇನೆ" ಎಂದು ನೀಡುವ ಭರವಸೆಯ ಮಾತು, ದ್ರುಪದ ದ್ರೋಣರ ಯುದ್ಧದಲ್ಲಿ ದ್ರುಪದನು ದ್ರೋಣರನ್ನು ಮೂದಲಿಸುವ ರೀತಿ, ಸೂರ್ಯೋದಯದ ಪ್ರಕೃತಿ ಚಿತ್ರಣ, ಸರೋವರವನ್ನು ಪ್ರವೇಶಿಸಿದ ದುರ್ಯೋಧನನನ್ನು ಹೊರಕ್ಕೆಬ್ಬಿಸಲು ಭೀಮನು ಅಬ್ಬರಿಸುವ ಮಾತುಗಳು ಕಾವ್ಯದಲ್ಲಿ ಸೊಗಸಾಗಿ ಮೂಡಿ ಬಂದಿವೆ.

'ನೇಮಿ ಚರಿತೆ'ಯಲ್ಲಿ ವಿಂಧ್ಯಕ – ವಾಗುರೆಯ, ನಂದಿಯ, ಸೂರದತ್ತ – ಸುದತ್ತ ವರ್ತಕರ, ಚಾರುದತ್ತನ, ಕಾಮನ ಹಾಗೂ ಕೌರವ–ಪಾಂಡವರ ಕಥೆಗಳು ಬರುತ್ತವೆ. ಇಲ್ಲಿ ಬರುವ ಕೃಷ್ಣ – ಜರಾಸಂಧರ (ನಾರಾಯಣ–ಪ್ರತಿನಾರಾಯಣರು) ಮಹಾಯುದ್ಧದಲ್ಲಿ ಕೌರವ–ಪಾಂಡವರ ಯುದ್ಧವೂ ಸೇರಿಹೋಗುತ್ತದೆ. ಇದೊಂದು ಮಧ್ಯಮ ವರ್ಗದ ಕಾವ್ಯ. ಕಾವ್ಯದ ಉದ್ದಕ್ಕೂ ಗಾದೆ ಮಾತುಗಳು, ಜಾಣ್ನುಡಿಗಳು, ಜೀವನ ಮೌಲ್ಯವನ್ನು ಪ್ರತಿಪಾದಿಸುವ ಸೂಕ್ತಿಗಳು ಹೇರಳವಾಗಿ ಲಭಿಸುತ್ತವೆ.

ನೇಮಿನಾಥನ ಬದುಕಿನಲ್ಲಿ ಆತನ ವೈರಾಗೋದಯದ ಸಂದರ್ಭ ಬಹುಮಹತ್ವವಾದುದು. ಅದು ಶ್ರೀಕೃಷ್ಣನಿಗೆ ರಾಜಕೀಯ ತಂತ್ರವಾದರೆ, ಶ್ರೀನೇಮಿಜಿನೇಶನಿಗೆ ಅಹಿಂಸಾ ತತ್ತ್ವವನ್ನು ಪ್ರತಿಪಾದಿಸುವ ಪ್ರಸಂಗವಾಗಿದೆ.

## ಚಾವುಂಡರಾಯ ಪುರಾಣ ಭಾಗವಾದ ನೇಮಿನಾಥ ಚರಿತೆ:

ಗಂಗವಂಶದ ಮಾರಸಿಂಹನ ದಂಡನಾಯಕನಾಗಿದ್ದ ಚಾವುಂಡರಾಯನು 'ಚಾವುಂಡರಾಯ ಪುರಾಣ'ದ ಕರ್ತೃ. ಕಲಿಯಾಗಿದ್ದ ಚಾವುಂಡರಾಯನು ಕವಿಯಾಗಿ ರಚಿಸಿದ ತ್ರಿಷಷ್ಠಿ ಲಕ್ಷಣ ಮಹಾಪುರಾಣವು 'ಚಾವುಂಡರಾಯ ಪುರಾಣ' ಎಂಬ ಹೆಸರಿನಲ್ಲಿ ಪ್ರಸಿದ್ಧವಾದ ಧಾರ್ಮಿಕ ಹಾಗೂ ಚಾರಿತ್ರಿಕ ಪಠ್ಯವಾಗಿದೆ. ಈ ಗ್ರಂಥದ ಹೆಸರೇ ಹೇಳುವಂತೆ 24 ಜನ ತೀರ್ಥಂಕರರು, 12 ಜನ ಚಕ್ರವರ್ತಿಗಳು, 9 ಜನ ಬಲದೇವರು, 9 ಜನ

ವಾಸುದೇವರು (ನಾರಾಯಣ) ಮತ್ತು 9 ಜನ ಪ್ರತಿವಾಸುದೇವರ ಜೀವನ ಚರಿತ್ರೆ ಇರುವ ಗ್ರಂಥ ತ್ರಿಷಷ್ಠಿ ಲಕ್ಷಣ ಮಹಾಪುರಾಣ.

ಈ ಗ್ರಂಥದಲ್ಲಿ ಆದಿಪುರಾಣ, ಶಾಂತಿಪುರಾಣ, ಮುನಿಸುವ್ರತ ಪುರಾಣ, ನೇಮಿ ಪುರಾಣ ಮತ್ತು ವರ್ಧಮಾನ ಪುರಾಣ ಭಾಗಗಳ ವ್ಯಾಪ್ತಿಯು ಮಾತ್ರ ದೊಡ್ಡದಾಗಿವೆ. ಚಾವುಂಡರಾಯನು ಸರಳ ಹಾಗೂ ನೇರ ಶೈಲಿಯಲ್ಲಿ ಗ್ರಂಥ ರಚನೆ ಮಾಡಿದ್ದಾನೆ. ಇವನು ಬಹುವಾಗಿ ಬಳಸಿರುವುದು ಉಪಮಾಲಂಕಾರ ಮಾತ್ರ.

ಸಂಸ್ಕೃತ ಜೈನ ಪುರಾಣಗಳ ಕಥನಗಳನ್ನು ಸಮಗ್ರವಾಗಿ ಕನ್ನಡಕ್ಕೆ ಮೊತ್ತ ಮೊದಲ ಬಾರಿಗೆ ಗದ್ಯದಲ್ಲಿ ತಂದುಕೊಟ್ಟ ತ್ರಿಷಷ್ಠಿಲಕ್ಷಣ ಮಹಾಪುರಾಣಕ್ಕೆ ಚಾರಿತ್ರಿಕ ಮಹತ್ವವಿದೆ.

ಚಾವುಂಡರಾಯ ಪುರಾಣದಲ್ಲಿ ಕೃಷ್ಣನ ಕುಟುಂಬ, ಪರಿವಾರದ ಕಥೆ ವಿಸ್ತಾರವಾಗಿ ಬಂದಿದೆ. ಸುಮಾರು ಇಪ್ಪತ್ತು ಜನ ತೀರ್ಥಂಕರರ ಪುರಾಣವನ್ನು ಕೇವಲ ಮೂರುನಾಲ್ಕು ಪುಟಗಳ ಚೌಕಟ್ಟಿಗೆ ಇಳಿಸಿ, ವಸುದೇವ, ರೋಹಿಣಿ, ದೇವಕಿ, ಕೃಷ್ಣ, ನಂದಗೋಪ, ಗೋಕುಲ, ರುಕ್ಮಿಣಿ, ಸತ್ಯಭಾಮ, ಜಾಂಬವತಿ, ಪ್ರದ್ಯುಮ್ನ ಮತ್ತು ನಾರದ ಇವರ ಚರಿತೆಯನ್ನು ಸುಮಾರು ಮೂವತ್ತು ಪುಟಗಳವರೆಗೆ ಬೆಳೆಸಿರುವುದು ವಿಶೇಷ. ರುಕ್ಮಿಣಿ ಸತ್ಯಭಾಮೆಯರ ನಡುವಿನ ವಿರಸ, ಮೇಲುಗೈ ಪಡೆಯಲು ನಡೆಸುವ ಪೈಪೋಟಿ, ಕೃಷ್ಣನ ಚಮತ್ಕಾರ, ಇವರೆಲ್ಲರಲ್ಲಿರುವ ಅಕ್ಕರೆಯ ರೂಪ ಸ್ವರೂಪ ಪ್ರಪ್ರಥಮವಾಗಿ ಪ್ರಕಟಗೊಂಡಿದೆ. ಇದು ತುಂಬ ವಿಸ್ತಾರವಾಗಿ ಬಂದಿರುವುದರ ಜೊತೆಗೆ ಸರಸವಾಗಿ, ವಿನೋದಮಯವಾಗಿ ಹೃದ್ಯವಾಗಿದೆ. [17] ಚಾವುಂಡರಾಯನ ಗದ್ಯ ಶೈಲಿಯ ಶಕ್ತಿ ಮತ್ತು ಯಶಸ್ಸು ನೇಮಿನಾಥ ಪುರಾಣದಲ್ಲಿ ಹೆಪ್ಪುಗಟ್ಟಿದೆ.

## ಚಂದ್ರಸಾಗರವರ್ಣಿ

ಚಂದ್ರಸಾಗರವರ್ಣಿ 19ನೆಯ ಶತಮಾನದ ಅಗ್ರಗಣ್ಯ ಕವಿ. ಈತನಿಗೆ ಹಲವು ಹೆಸರುಗಳಿದ್ದು ಅವುಗಳಲ್ಲಿ ಮುದ್ದುಬ್ರಹ್ಮ, ಬ್ರಹ್ಮಣಾಂಕ ಎಂಬ ಹೆಸರುಗಳು ಹೆಚ್ಚು ರೂಢಿಯಲ್ಲಿದ್ದವು. ಈ ಹೆಸರುಗಳು ಸಂನ್ಯಾಸಾಶ್ರಮಕ್ಕಿಂತ ಮೊದಲಿನ ಹೆಸರುಗಳು. ಬ್ರಹ್ಮಣಾಂಕನ ಕಾಲವನ್ನು ಕ್ರಿ.ಶ.1760 ಇರಬಹುದೆಂದು ಹಂಪನಾಗರಾಜಯ್ಯನವರು ಊಹಿಸುತ್ತಾರೆ. ಬ್ರಹ್ಮಣಾಂಕನು ತುಮಕೂರು ಜಿಲ್ಲೆಯ ತೋವಿನಕೆರೆ ಗ್ರಾಮದವನು. ಇವನ ಪೂರ್ವಿಕರು ಬಳ್ಳಾರಿ ಜಿಲ್ಲೆಯ ಸಮೀಪದ ತುಂಗಭದ್ರೆಯ ಬಳಿಯ ಹುಲಿಗೆಯ – ಇಂದಿನ ಮುನಿರಾಬಾದಿನ – ಹೆಗ್ಗಡೆಗಳ ಮನೆತನಕ್ಕೆ ಸೇರಿದ ಇವರು, ತೋವಿನಕೆರೆಗೆ ಬಂದು ನೆಲೆಸಿದರು. ಚಂದ್ರಸಾಗರ ವರ್ಣಿಯ ತಂದೆ ಚಂದಣ್ಣ ಹಾಗೂ ತಾಯಿ ಪೊಂಬುಜಿ. ಚಂದ್ರನಾಥ, (ಗುಟ್ಟ) ಬ್ರಹ್ಮ, ಪದ್ಮ(ಣ್ಣ) ಇವರು ಕವಿಯ ಒಡಹುಟ್ಟಿದವರು. ಇವನು ಸುಮಾರು

1790ರಲ್ಲಿ ವಿವಾಹವಾಗಿ ಕೆಲವು ವರ್ಷಗಳಷ್ಟೇ ಗೃಹಸ್ಥಾಶ್ರಮದಲ್ಲಿದ್ದು ಸುಮಾರು 1803ರಲ್ಲಿ ಸಂನ್ಯಾಸವನ್ನು ಸ್ವೀಕರಿಸಿದ. 1835ರಲ್ಲಿ ನಿಧನನಾದನು ಎಚಿದು ತಿಳಿದುಬರುತ್ತದೆ.

ಈತನು ಸುಮಾರು 46 ಕೃತಿಗಳನ್ನು ರಚಿಸಿದ್ದಾನೆ. ಈ 46 ಕೃತಿಗಳಲ್ಲಿ ಹದಿನೆಚಿಟು ಕಾವ್ಯಗಳನ್ನು ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಅಧ್ಯಯನ ಕೇಂದ್ರ, ಹಸ್ತ ಪ್ರತಿಗಳನ್ನು ಬಳಸಿಕೊಂಡು ಪ್ರಕಟಿಸಿದೆ[18]. ಅವನ ಕೆಲವು ಪ್ರಸಿದ್ಧ ಕೃತಿಗಳೆಂದರೆ ಜಿನಭಾರತ, ಜಿನರಾಮಾಯಣ, ಕೃಷ್ಣನ ಪ್ರತಿಷ್ಠೆ ಚರಿತೆ ವರ್ಣನೆ, ಬೆಳಗೊಳದ ಮಸ್ತಕಾಭಿಷೇಕ, ಕರ್ತರು ಪೂಜೆಮಾಡಿಸಿದ್ದು, ಜಿನಸೇನಾಚಾರ್ಯರು ಪೂಜೆ ಮಾಡಿಸಿದ್ದು, ಪಾರ್ಶ್ವನಾಥನ ಪಂಚ ಕಲ್ಯಾಣ, ಆಗಮದೋಗಟೆ ಪದ್ಯ, ಸಂಸಾರದ ಸುಖ ಕಷ್ಟ, ಚಂದ್ರಸಾಗರರ ಸ್ವಪ್ನ ಮೊದಲಾದವು.

ಚಂದ್ರಸಾಗರವರ್ಣಿ ಸಂಸಾರಿಯಾಗಿದ್ದಾಗಲೇ ಕೆಲವು ಕಾವ್ಯಗಳನ್ನು ರಚಿಸಿದ. ಅವುಗಳಲ್ಲಿ ಬೃಹತ್ ಕಾವ್ಯವೆಂದರೆ ಪ್ರಸಿದ್ಧವಾದ ಜಿನ ಭಾರತ. ಅವನ "ಕಾಲಕ್ಕೆ ಗದುಗಿನ ಭಾರತ ಕನ್ನಡ ನಾಡಿನ ಎಲ್ಲೆಡೆಯೂ ಕವಿ ಗಮಕಿಗಳಿಂದ ಪಾರಾಯಣವಾಗುತ್ತಿತ್ತು. ಜೈನ ಧರ್ಮಿಯನೂ ಧರ್ಮಾಭಿಮಾನಿಯೂ ಆದ ಜೈನ ಬ್ರಹ್ಮಣಾಂಕ ನಾರಣಪ್ಪನನ್ನು ಅನುಕರಿಸಿ ಭಾಮಿನಿ ಷಟ್ಪದಿಯಲ್ಲೇ ರಚನೆಗೆ ತೊಡಗಿದನು.

ಉದಾ: ವಿರಹಗಳಗಾನಂದ ರಸ ಭೂ
ವರರಿಗತಿ ವೀರತ್ವ ಯತಿಗಳ
ವಿರತ ಸುಜನಕೆ ಚಾರುಚರಿತವು ಮಂತ್ರಿ ಜನಗಳಿಗೆ
ವರವಿಲಾಸದ ನುಡಿಗಳನುಸರ
ವಿರಿಸಿ ರಚಿಸಿದ ಬ್ರಹ್ಮಣಾಂಕನು
ಧರೆಯೊಳತಿವಿಸ್ತರದಿ ಮೆರೆಯಲಿ (ವುದು) ಚಾರು ಭಾರತವು

ಈ ಪದ್ಯವು ಕುಮಾರವ್ಯಾಸನ 'ಅರಸುಗಳಿಗಿದು ವೀರ' ಪದ್ಯದ ಮಾದರಿಯಲ್ಲಿ ರಚಿತವಾಗಿದೆ. ಇದು ದೊಡ್ಡಗಾತ್ರದ ಕಾವ್ಯವಾಗಿದ್ದು; ಪ್ರತಿಯೊಂದು ಸಂಧಿಗೂ ಮೂರು ಪಾದದ (ಷಟ್ಪದಿಯ–ಅರ್ಧಭಾಗದ) ಸೂಚನೆಯಿದ್ದು ಅದು ಆಯಾ ಸಂಧಿಯ ಕತೆಯನ್ನು ಸೂಚಿಸುತ್ತದೆ. ಆದರೆ "ಈ ಜಿನಭಾರತ ಕಾವ್ಯಮೌಲ್ಯದ ದೃಷ್ಟಿಯಿಂದ ಗದುಗಿನ ಭಾರತದಂತೆ "ಜಿನಭಾರತ" ಆಗಲಾರದು ಎನ್ನುತ್ತಾರೆ ಹಂಪನಾಗರಾಜಯ್ಯನವರು.

ಚಾವುಂಡರಾಯ, ಕರ್ಣಪಾರ್ಯ, ನೇಮಿಚಂದ್ರ, ಮಂಗರಸ, ಬಂಧುವರ್ಮ, ಗುಣವರ್ಮ ಮೊದಲಾದವರೆಲ್ಲರೂ ಬರೆದ ಜೈನಪರವಾದ ಭಾರತ ಕಥೆಗಳು ಹರಿವಂಶ

(ಯದುವಂಶ) ಕುರುವಂಶಗಳ ಕಥೆಗಳನ್ನು ಒಳಗೊಂಡಿವೆ. ಬ್ರಹ್ಮಣಾಂಕನ ವಿಶೇಷವೆಂದರೆ ಹರಿವಂಶವನ್ನು ಬಿಟ್ಟು ಕೇವಲ ಕುರುವಂಶವನ್ನಷ್ಟೇ ಕಥೆಯಾಗಿಸಿದ್ದಾನೆ. ಮಂಗರಸನನ್ನು ತನ್ನ ಕಾವ್ಯದ ಗುರುವೆಂದು ಆದರ್ಶವಾಗಿರಿಸಿಕೊಂಡಿರುವ ಇವನಲ್ಲಿ ಮಂಗರಸನ ಸಿದ್ಧತೆ, ಅಭ್ಯಾಸ, ಕ್ರಮಬದ್ಧವಾದ ಶಿಕ್ಷಣದ ಕೊರತೆ ಕಂಡುಬರುತ್ತದೆ. ರಾಮಾಯಣ ಮತ್ತು ಮಹಾಭಾರತ ಎರಡೂ ಕಾವ್ಯಗಳನ್ನು ಬರೆದ ಒಬ್ಬನೇ ಕವಿ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

ಬ್ರಹ್ಮಣಾಂಕನಿಗೆ ಕಾರಣಾಂತರದಿಂದ ಸಂಸಾರದಲ್ಲಿ ವೈರಾಗ್ಯ ಹುಟ್ಟಿ ಆತ ಲಕ್ಷ್ಮೀಸೇನ ಮುನಿಗಳಿಂದ ದೀಕ್ಷೆ ಪಡೆದು 'ಚಂದ್ರಸಾಗರ ವರ್ಣಿ'ಯಾಗಿ ಸೇನಗಣದ ಪರಂಪರೆಗೆ ಸೇರಿದ ಮುನಿಯಾದನು.

## ಅಧ್ಯಾಯ 2 – ಅಡಿ ಟಿಪ್ಪಣಿಗಳು

(1) ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ, ಲೇ.: ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರಿ. ಪ್ರ.: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ಪುಟ 33,

(2) ಅದೇ – ಪುಟ.37.

(3) ನೇಮಿಜಿನೇಶ ಸಂಗತಿ – ಸಂ.ಎ.ಶಾಂತಿರಾಜ ಶಾಸ್ತ್ರಿ. – ನಿವೇದನ ಪ್ರಥಮ ಮುದ್ರಣ – ಪುಟ 13

(4) ಅದೇ – ಪುಟ 13.

(5) ಸಾಂಗತ್ಯ ಕವಿಗಳು – ಲೇ.: ಹಂಪನಾಗರಾಜಯ್ಯ. ಪ್ರ.: ಸ್ವಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು. ಪುಟ – 36.

(6) ಇದಕ್ಕೂ ಹರಿವಂಶವೆಂಬ ಹೆಸರಿದೆ.

(7) ನೇಮಿಚಂದ್ರ, ಲೇ. ಶ್ರೀ ಎನ್.ಅನಂತರಂಗಾಚಾರ್. ಎಂ.ಎ.,–ಮೈಸೂರು ವಿಶ್ವವಿದ್ಯಾಲಯ ಪ್ರಚಾರ ಪುಸ್ತಕಮಾಲೆ. –ಪುಟ–8

(8) ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ. ಮುಗಳಿ

(9) ಅದೇ

(10) 'ಸಾಂಗತ್ಯ ಕವಿಗಳು' ಸಾಮಾನ್ಯನಿಗಾಗಿ ಸಾಹಿತ್ಯ ಚರಿತ್ರೆ – ಡಾ.ಹಂ.ಪ.ನಾಗರಾಜಯ್ಯ – ಪುಟ 37.

(11) ಅದೇ – ಪುಟ 37.

(12) ಅದೇ – ಪುಟ 38.

(13) ಅದೇ – ಪುಟ 37.

(14) ಸಾಳ್ವ ಸಂಪುಟ – ಸಂ.ಪ್ರೊ.ಎಂ.ಎ.ಜಯಚಂದ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಸಂಪಾದಕರ ನುಡಿ – ಪುಟ 8.

(15) ಡಾ. ಹಂಪನಾಗರಾಜಯ್ಯನವರು ತಮ್ಮ ಇತ್ತೀಚಿನ ಸಂಶೋಧನೆಯಿಂದ ಸಾಳ್ವಕವಿಯ ಕಾಲವನ್ನು ಕ್ರಿ.ಶ.1485 ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ.

(16) ಸಾಳ್ವ ಸಂಪುಟ – ಪೂರ್ವೋಕ್ತ – ಪುಟ 8.

(17) ಚಾವುಂಡರಾಯ ಸಂಪುಟ – ಸಂ.ಪ್ರೊ.ಕಮಲಾ ಹಂಪನಾ – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ – ಪುಟ xi.

(18) ಚಂದ್ರಸಾಗರ ವರ್ಣಿಯ ಕೃತಿಗಳು:
ಸಂಪಾದಕರು : ಪ್ರೊ.ಹಂಪನಾಗರಾಜಯ್ಯ – ಎಸ್.ಶಿವಣ್ಣ,
ಪ್ರಕಟಣೆ : ಕನ್ನಡ ಸಾಹಿತ್ಯ ಪರಿಷತ್ತು 1981 – ಪುಟ: x, xi
ಟಿಪ್ಪಣಿ: ಇವು ಲಘುಕೃತಿಗಳಾಗಿವೆ. ಜಿನಭಾರತ ಸಂಗ್ರಹದಲ್ಲಿಲ್ಲ. ಜಿನಭಾರತ ಪ್ರತ್ಯೇಕವಾಗಿ ಪ್ರಕಟವಾಗಿದೆ.

# ಪ್ರಾಣಪ್ರಿಯ ಕಾವ್ಯ – ಕವಿಗಳ ಪರಿಚಯ

ಸಮಸ್ಯಾಪೂರ್ಣ ಕಾವ್ಯವಾದ ಸಂಸ್ಕೃತ 'ಪ್ರಾಣಪ್ರಿಯ ಕಾವ್ಯ'ದ ಕರ್ತೃ ರತ್ನಸಿಂಹಮುನಿಗಳು. ಈ ಕಾವ್ಯಕ್ಕೆ ಆಧಾರ ಶ್ರೀ ಮಾನತುಂಗಾಚಾರ್ಯರ ಭಕ್ತಾಮರ ಸ್ತೋತ್ರ. 'ಪ್ರಾಣಪ್ರಿಯ ಕಾವ್ಯ'ವನ್ನು ಕನ್ನಡಕ್ಕೆ ಅನುವಾದಿಸಿದವರು ಶ್ರೀ ಭುವನಹಳ್ಳಿ ಡಿ. ಪದ್ಮನಾಭ ಶರ್ಮರು. ಈ ಮೂರೂ ರಚನೆಗಳ ಕರ್ತೃಗಳ ಪರಿಚಯವನ್ನು ಈ ಕೆಳಗೆ ಕೊಡಲಾಗಿದೆ.

## ಅ. ಶ್ರೀ ಮಾನತುಂಗಾಚಾರ್ಯರು

ಸಂಸ್ಕೃತ ಸಾಹಿತ್ಯದಲ್ಲಿ ಶ್ಲೋಕಗಳ ರಚನೆ ಎರಡನೆ ಶತಮಾನದಿಂದ ಆರಂಭವಾಯಿತು. ಅನೇಕ ಜನ ಶೈವ, ವೈಷ್ಣವ, ಶಾಕ್ತ, ಜೈನ ಹಾಗೂ ಬೌದ್ಧ ಭಕ್ತರು ಭಕ್ತಿರಸದಿಂದ ಕೂಡಿದ ಸುಂದರವಾದ ಸ್ತೋತ್ರಗಳನ್ನು ರಚಿಸಿದ್ದಾರೆ. ಜೈನ ಭಕ್ತಕವಿಗಳಲ್ಲಿ ಆಚಾರ್ಯ ಸುಮಂತ ಭದ್ರ ಹಾಗೂ ಪಾತ್ರಕೇಸರಿ ಬಹಳ ಪ್ರಸಿದ್ಧರಾದವರು. ಪಾತ್ರಕೇಸರಿಯವರ ಅನಂತರ ಸುಮಾರು ಒಂದು ಶತಮಾನದೊಳಗೆ ಆಚಾರ್ಯ ಮಾನತುಂಗರಂತಹ ಭಕ್ತರು ಸ್ತೋತ್ರಗಳ ರಚನೆಯಲ್ಲಿ ತೊಡಗಿದರು.

ಮಾನತುಂಗಾಚಾರ್ಯರು 'ಭಕ್ತಾಮರ ಸ್ತೋತ್ರ' ಎಂಬ ಸುಂದರವಾದ ಸ್ತೋತ್ರವನ್ನು ರಚಿಸಿದರು. ಇವರ ಕಾಲ ಸುಮಾರು ಕ್ರಿ.ಶ.11ನೆಯ ಶತಮಾನ. ಇವರು ಬಾಣ ಹಾಗೂ ಮಯೂರರ ಸಮಕಾಲೀನ ಕವಿ.[(1)] ಮಾನತುಂಗಾಚಾರ್ಯರ ಭಕ್ತಾಮರ ಸ್ತೋತ್ರದಲ್ಲಿ 48 ಪದ್ಯಗಳಿವೆ. ಇದನ್ನು ಶ್ವೇತಾಂಬರ ಹಾಗೂ ದಿಗಂಬರ ಎರಡೂ ಸಂಪ್ರದಾಯದ ಭಕ್ತರೂ ಬಹಳ ಭಕ್ತಿಯಿಂದ ಪಠಿಸುತ್ತಾರೆ. ಆದರೆ ಶ್ವೇತಾಂಬರ ಸಂಪ್ರದಾಯದವರು 32ರಿಂದ 35ರ ವರೆಗಿನ 4 ಪದ್ಯಗಳನ್ನು ಬಿಟ್ಟು ಉಳಿದ 44 ಪದ್ಯಗಳನ್ನು ಪಠಿಸುತ್ತಾರೆ. ಈ ಸ್ತೋತ್ರವು ಸಂಸ್ಕೃತ ಸಾಹಿತ್ಯದಲ್ಲಿ ಒಂದು ಅತ್ಯುತ್ತಮ ರಚನೆಯಾಗಿದೆ.

ಕವಿಯು ತನ್ನ ವಿನಯವನ್ನು ಪ್ರದರ್ಶಿಸುತ್ತಾ ಹೀಗೆ ಹೇಳುತ್ತಾರೆ – ನಾನು ಬಹಳ ಕಡಿಮೆ ಓದಿದವನು. ಈ ಕಾರಣದಿಂದ ವಿದ್ವಾಂಸರ ಅಪಹಾಸ್ಯಕ್ಕೆ ಪಾತ್ರನಾಗಿದ್ದೇನೆ; ಆದರೂ ಹೇ ಜಿನ! ನಿನ್ನ ಮೇಲಿನ ಭಕ್ತಿಯೇ ನನ್ನನ್ನು ಮುಖರವನ್ನಾಗಿ ಮಾಡಿದೆ. ವಸಂತದಲ್ಲಿ ಕೋಗಿಲೆಯು ಸ್ವಯಂ ಹಾಡಲು ಇಷ್ಟಪಡುವುದಿಲ್ಲ. ಆದರೆ ಮಾವಿನ ಚಿಗುರು ಅದನ್ನು ಹಾಡುವಂತೆ ಬಲಾತ್ಕರಿಸುತ್ತದೆ –

ಅಲ್ಪಶ್ರುತಂ ಶ್ರುತವತಾಂ ಪರಿಹಾಸಧಾಮ
ತ್ವದ್ಭಕ್ತಿರೇವ ಮುಖರೀಕುರಿತೇ ಬಲಾನ್ಮಾಮ್
ಯತ್ಕೋಕಿಲಃ ಕಿಲಮಧೌ ವಿಶೌತಿ
ತಚ್ಚಾರು ಚೂತಕಲಿಕಾನಿಕರೈಕ ಹೇತು

ಈ ಸ್ತೋತ್ರವು ವಸಂತ ತಿಲಕಾವೃತ್ತದಲ್ಲಿದ್ದು, ಆದಿತೀರ್ಥಂಕರರಾದ ವೃಷಭದೇವರ ಸ್ತೋತ್ರವಾಗಿದೆ. ಆದರೆ ಭಾವನೆಗಳ ಉದಾತ್ತತೆಯ ಕಾರಣದಿಂದ ಇದನ್ನು ಯಾವ ತೀರ್ಥಂಕರನಿಗಾದರೂ ಅನ್ವಯಿಸಬಹುದು.

## ಆ. ರತ್ನಸಿಂಹ ಮುನಿಗಳು

"ರತ್ನಸಿಂಹ ಮುನಿಗಳು ಶ್ರೀಸಿಂಹಸಂಘದ ಧರ್ಮಸಿಂಹ ಮುನಿಗಳ ಶಿಷ್ಯರು. ಇವರು ಪ್ರಾಣಪ್ರಿಯ ಕಾವ್ಯವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾರೆ. ಜೈನಾಚಾರ್ಯರ ಪಙ್ತೆಯಲ್ಲಿ ಪ್ರಸಿದ್ಧರಾಗಿರುವ ಮಾನತುಂಗಾಚಾರ್ಯರ ಭಕ್ತಾಮರ ಸ್ತೋತ್ರದ ಪ್ರತಿವೃತ್ತದ ನಾಲ್ಕನೆಯ ಪಾದವನ್ನು ತಮ್ಮ ಕಾವ್ಯದ ಪ್ರತಿವೃತ್ತದ ನಾಲ್ಕನೆಯ ಪಾದಕ್ಕೆ ಹೊಂದಿಸಿಕೊಂಡು ಸಮಸ್ಯಾಪೂರಣ ರೂಪದಲ್ಲಿ ಬಹಳ ಸುಂದರವಾಗಿ, ಸಹೃದಯ ರಂಜಕವಾಗಿ ಸರಸಪೂರಿತವಾಗಿ ರಚಿಸಿದ್ದಾರೆ".

## ಇ. ಭುವನಹಳ್ಳಿ ಡಿ. ಪದ್ಮನಾಭ ಶರ್ಮರು [3]

ಒಂದು ಕಾಲದಲ್ಲಿ ಬಡತನದ ಬದುಕಿನಲ್ಲೂ ಉದಾರಿಗಳಾಗಿ ನಗುನಗುತ್ತಾ ಶ್ರೇಷ್ಠ ಗ್ರಂಥಗಳನ್ನು ರಚಿಸುತ್ತಾ ಅಪಾರ ಪಾಂಡಿತ್ಯದಿಂದ ವಿಜೃಂಭಿಸುತ್ತಾ ಎಲೆಮರೆಯ ಕಾಯಿಯ ಹಾಗೆ ಇದ್ದ ವಿದ್ವಾಂಸರು ಇರುತ್ತಿದ್ದರು. ಅಂತಹವರಲ್ಲಿ ರತ್ನಸಿಂಹ ಮುನಿಗಳ 'ಪ್ರಾಣಪ್ರಿಯ ಕಾವ್ಯ'ವನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟ ಘನ ಜೈನವಿದ್ವಾಂಸ – ಸಜ್ಜನ ಬರಹಗಾರರಾದ ಶ್ರೀ. ಭುವನಹಳ್ಳಿ ಡಿ.ಪದ್ಮನಾಭ ಶರ್ಮರು ಒಬ್ಬರು.

ಜೈನ ವಿದ್ವಾಂಸರಲ್ಲಿ ಎರ್ತೂರು ಶಾಂತಿರಾಜ ಶಾಸ್ತ್ರಿಗಳನ್ನು ಬಿಟ್ಟರೆ ಪದ್ಮನಾಭ ಶರ್ಮರ ಹಾಗೆ ಕಥೆ, ಕಾದಂಬರಿ, ನಾಟಕ, ಜೀವನ ಚರಿತ್ರೆ, ಕಾವ್ಯ, ಅನುವಾದ, ಜೈನಧರ್ಮ ಸ್ತೋತ್ರ, ಬಾಲಬೋಧೆ, ಪೂಜಾಸಾಹಿತ್ಯ, ಸಿದ್ಧಾಂತ ಕೃತಿಗಳನ್ನು ರಚಿಸಿದವರು ಇನ್ನೊಬ್ಬರಿಲ್ಲ. 100 ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ ಹೆಗ್ಗಳಿಕೆ ಶರ್ಮರದು.

ಸಾತ್ವಿಕ ಜೈನ ವಿದ್ವಾಂಸರಾದ ಪಂಡಿತ ಪದ್ಮನಾಭ ಶರ್ಮರು 26.11.1924ರಲ್ಲಿ ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ ಭುವನಹಳ್ಳಿಯಲ್ಲಿ ಜನಿಸಿದರು. ಪ್ರಸಿದ್ಧ ಜ್ಯೋತಿಷ್ಯ ವಿದ್ವಾಂಸರಾದ ದೇವೇಂದ್ರ ಜೋಯಿಸ ಮತ್ತು ಚಂದ್ರಾವತಮ್ಮ ದಂಪತಿಗಳಿಗೆ ಹಿರಿಯ ಪುತ್ರರಾಗಿ ಜನಿಸಿದ ಇವರಿಗೆ ಬ್ರಹ್ಮಸೂರಿ ಶರ್ಮ, ಶ್ರೀಪತಿ ಜೋಯಿಸ, ಶ್ರೀನಿವಾಸ ಶರ್ಮ, ಗೋಪಾಲ ಶರ್ಮ ಎಂಬ ನಾಲ್ವರು ಕಿರಿಯ ಸೋದರರು. ಇವರಲ್ಲಿ ಶ್ರೀಪತಿ ಜೋಯಿಸರು ಪ್ರಸಿದ್ಧ ಜ್ಯೋತಿಷ್ಯ ವಿದ್ವಾಂಸರಾಗಿ ಅಣ್ಣನಂತೆಯೇ ಜೈನಧರ್ಮದ ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಪದ್ಮನಾಭ ಶರ್ಮರ ಮನೆತನದ ಇತಿಹಾಸ ಭವ್ಯವಾದುದ್ದು. ಪದ್ಮನಾಭ ಶರ್ಮರ ಮನೆತನದ ಹಿರಿಯರು ಪಿರಿಯಾಪಟ್ಟಣದ ರಾಜರ ಆಸ್ಥಾನಗಳಲ್ಲಿ ಮಂತ್ರಿಗಳಾಗಿ ವಿದ್ವಾಂಸರಾಗಿ ವಿರಾಜಿಸಿದ್ದಾಗ ಪಿರಿಯಾಪಟ್ಟಣದಲ್ಲಿ ಕಟ್ಟಿಸಿದ ಬೊಮ್ಮರಸಯ್ಯನ ಕೆರೆ ಮತ್ತು ದೇವಚಂದ್ರನ ಕೆರೆಗಳು ಇಂದಿಗೂ ಇವೆ. ಶರ್ಮರ ತಾಯಿ ಚಂದ್ರಾವತಮ್ಮ ಚಾಮರಾಜನಗರದ ಪ್ರಸಿದ್ಧ ವಿದ್ವಾಂಸರಾಗಿದ್ದ, ಕನ್ನಡದಲ್ಲಿ ಅಪೂರ್ವ ಗ್ರಂಥಗಳನ್ನು ರಚಿಸಿದ, ಬಿ. ಪದ್ಮರಾಜ ಪಂಡಿತರ ತಾಯಿ ಹಾಗೂ ಪ್ರಸಿದ್ಧ ಜ್ಞಾನೇಶ್ವರ ಪಂಡಿತರ ಮಗಳು.

ಕಳೆದ ಶತಮಾನದಲ್ಲಿ ಹತ್ತಾರು ಕೃತಿಗಳನ್ನು ರಚಿಸಿ ತಮ್ಮದೇ ಆದ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಹತ್ತಾರು ಗ್ರಂಥಗಳನ್ನು ಪ್ರಕಟಿಸಿ ಪ್ರಸಿದ್ಧರಾಗಿದ್ದ ದಿ.ಪದ್ಮರಾಜ ಪಂಡಿತರ ಆಶ್ರಯದಲ್ಲಿ ಶರ್ಮರು ಬೆಳೆದರು.

ಬಾಲ್ಯದಿಂದಲೇ ವಿದ್ವಾಂಸರ ಮಾರ್ಗದರ್ಶನ ಅವರಿಗೆ ದೊರೆಯಿತು. ಇವರ ಬಾಲ್ಯದ ವಿದ್ಯಾಭ್ಯಾಸ ಚಾಮರಾಜನಗರದಲ್ಲಿ ನಡೆಯಿತು. ತಾತ (ತಾಯಿಯ ತಂದೆ) ಜ್ಞಾನೇಶ್ವರ ಪಂಡಿತರಿಗೆ ಗಂಡು ಮಕ್ಕಳಿರಲಿಲ್ಲ. ಆದ್ದರಿಂದ ಮೊಮ್ಮಗ ಶರ್ಮರನ್ನು ತಂದುಕೊಂಡು ಸಾಕಿಸಲಹಿದರು. ಜ್ಞಾನೇಶ್ವರ ಪಂಡಿತರು ಸಂಸ್ಕೃತ – ಪ್ರಾಕೃತ – ಕನ್ನಡ ಭಾಷೆಗಳಲ್ಲಿ ಘನವಿದ್ವಾಂಸರಾಗಿದ್ದರು. ಅವರಿಂದ ಶಿಕ್ಷಣ ದೊರೆತು ಶರ್ಮರೂ ಮೂರೂ ಭಾಷೆಗಳಲ್ಲಿ ಪ್ರವೀಣರಾದರು. ಪದ್ಮರಾಜ ಪಂಡಿತರಂತೂ ಜೈನಸಿದ್ಧಾಂತ ಮತ್ತು ಸಾಹಿತ್ಯಗಳಲ್ಲಿ ಅದ್ವಿತೀಯ ವಿದ್ವಾಂಸರಾಗಿದ್ದರು. ಹೀಗೆ ವಿದ್ವಾಂಸರ ನೆರಳಿನಲ್ಲಿ ಬಾಲ್ಯವನ್ನು ಕಳೆದು ಸಂಸ್ಕೃತ–ಕನ್ನಡ–ಪ್ರಾಕೃತಗಳಲ್ಲಿ ಪ್ರಾವೀಣ್ಯತೆ ಗಳಿಸಿದರು. ಸ್ವಶಕ್ತಿಯಿಂದ ಹಿಂದಿ ಮತ್ತು ಇಂಗ್ಲೀಷ್‌ಅನ್ನು ರೂಢಿಸಿಕೊಂಡರು. 16ನೇ ವಯಸ್ಸಿಗೆ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ಕವಿತೆಗಳನ್ನು

ಬರೆಯಲಾರಂಭಿಸಿದರು. ಬಾಲ್ಯದಲ್ಲಿ ನೂರಾರು ಸಂಸ್ಕೃತ ಶ್ಲೋಕಗಳನ್ನು ಕನ್ನಡಪದ್ಯಗಳನ್ನು ಕಂಠಪಾಠಮಾಡಿದ್ದರು. ಜೈನಾಗಮದ ಮಂತ್ರಗಳನ್ನು ಪೂಜಾಪಾಠಗಳಲ್ಲಿ ಕಲಿತರು. ಹೀಗೆ ಜೈನ ಧರ್ಮ ಸಾಹಿತ್ಯದ ಶಿಕ್ಷಣ ಮನೆಯಲ್ಲೇ ಶರ್ಮರಿಗೆ ಸಿಕ್ಕಿತು.

ಚಾಮರಾಜನಗರದ ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗ ಲಕ್ಷೀನಾರಾಯಣರೆಂಬ ಮುಖ್ಯೋಪಾಧ್ಯಾಯರು ಇವರನ್ನು ಸ್ಕೂಲ್ ಪೊಯೆಟ್ (ಶಾಲಾಕವಿ) ಎಂದು ಕರೆದು ಪ್ರೋತ್ಸಾಹಿಸಿದರು. ಶಾಲಾ ಕಾರ್ಯಕ್ರಮಗಳಲ್ಲಿ ಭಾಷಣಮಾಡಲು ಅವಕಾಶ ಕಲ್ಪಿಸಿದರು. ಒಮ್ಮೆ ಇವರು ಓದುತ್ತಿದ್ದ ಶಾಲೆಯಲ್ಲಿ ಜಯಚಾಮರಾಜೇಂದ್ರ ಒಡೆಯರ್ ಅವರ ವರ್ಧಂತಿ ಆಚರಿಸಿದಾಗ ಇವರನ್ನು ಭಾಷಣಕ್ಕೆ ಅಧ್ಯಾಪಕರ್ರು ಗೊತ್ತು ಮಾಡಿಧರು. ಆಗ ಅಲ್ಲಿ ಜಿಲ್ಲಾಧಿಕಾರಿಗಳಾಗಿದ್ದ ಮೀರ್ ಸಫ್ದಾರ್ ಹುಸೇನ್ ಅವರನ್ನು ಕಾರ್ಯಕ್ರಮಕ್ಕೆ ಅಧ್ಯಕ್ಷರಾಗಿರಲು ಆಹ್ವಾನಿಸಿದರು. ಹುಸೇನ್ ಅವರು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅಪಾರ ಅಭಿಮಾನವುಳ್ಳ ಜಿಲ್ಲಾಧಿಕಾರಿಯಾಗಿದ್ದರು. ಪದ್ಮನಾಭ ಶರ್ಮರ ಭಾಷಣ ಹಾಗೂ ಒಡೆಯರವರನ್ನು ಕುರಿತು ಬರೆದಿದ್ದ ಲಾವಣಿಯನ್ನು ಕೇಳಿದ ಜಿಲ್ಲಾಧಿಕಾರಿಗಳು "ಈತನು ವಿದ್ಯಾರ್ಥಿ ಅಲ್ಲ ಶಾಸ್ತ್ರೀ (ಪಂಡಿತ)" ಎಂಬ ಬಿರುದಿಗೆ ಯೋಗ್ಯ ಎಂದು ಪ್ರಶಂಸಿಸಿದರು.

ಶಿಕ್ಷಕ ವೃತ್ತಿಯಲ್ಲಿ ಬಹಳ ಆಸಕ್ತಿ ಇದ್ದುದರಿಂದ ಇಂಟರ್ ಮೀಡಿಯೇಟ್ ಮುಗಿದ ಕೂಡಲೇ 1946ರಲ್ಲಿ ಶಿಕ್ಷಕ ವೃತ್ತಿಗೆ ಸೇರಿದರು. ಅನೇಕ ಉಪಾಧ್ಯಾಯರ ಹಾಗೆ ಮಕ್ಕಳಿಗೆ ಕೇವಲ ಪಾಠವನ್ನು ಹೇಳುತ್ತಿರಲಿಲ್ಲ. ಕಥೆ ಹೇಳುತ್ತಿದ್ದರು, ನಾಟಕ ಆಡಿಸುತ್ತಿದ್ದರು, ಪದ್ಯ ಹೇಳಿಸುತ್ತಿದ್ದರು. ಬೆಟ್ಟದಪುರದಲ್ಲಿ ತಮ್ಮ ಶಿಕ್ಷಕ ವೃತ್ತಿಯನ್ನು ಆರಂಭಿಸಿದ ಶರ್ಮರು ಅನೇಕ ಕಡೆ ಸೇವೆಸಲ್ಲಿಸಿ ಜನಪ್ರಿಯ ಶಿಕ್ಷಕರಾಗಿ ಬೆಂಗಳೂರಿನ ಕೋಟೆ ಹೈಸ್ಕೂಲಿನಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದರು.

ನಿವೃತ್ತರಾದ ಮೇಲೆ ಪದ್ಮನಾಭ ಶರ್ಮರು ಹತ್ತಾರು ವರ್ಷ ನೂರಾರು ಗ್ರಂಥಗಳನ್ನು ನಿರಂತರವಾಗಿ ಬರೆದರು. ಇವರ ಕೃತಿಗಳು ವೈವಿಧ್ಯವಾದುದು. ಕಥೆ, ಕಾದಂಬರಿ, ಜೀವನ ಚರಿತ್ರೆ, ನಾಟಕ, ವ್ಯಾಕರಣ, ಕಾವ್ಯ, ಸಿದ್ಧಾಂತ, ಪೂಜಾಗ್ರಂಥ, ಬಾಲಬೋಧೆ, ಪ್ರಬಂಧ, ವಿಮರ್ಶೆ, ಹೀಗೆ ಬಗೆಬಗೆಯ ಗ್ರಂಥಗಳನ್ನು ರಚಿಸಿದ್ದಾರೆ. ಪ್ರಾಕೃತ, ಹಿಂದಿ ಹಾಗೂ ಸಂಸ್ಕೃತದಿಂದ ಹತ್ತಾರು ಗ್ರಂಥಗಳನ್ನು ಅನುವಾದಿಸಿದ್ದಾರೆ. ಹೀಗೆ ಅನುವಾದಿಸಿದ ಕೃತಿಗಳಲ್ಲಿ ರತ್ನಸಿಂಹ ಮುನಿಗಳು ಸಂಸ್ಕೃತದಲ್ಲಿ ರಚಿಸಿದ 'ಪ್ರಾಣಪ್ರಿಯ ಕಾವ್ಯ'ವೂ ಒಂದು.

ಹಣಕ್ಕಾಗಿ ಕೀರ್ತಿಗಾಗಿ ಪ್ರಶಸ್ತಿಗಾಗಿ ಎಂದೂ ಪುಸ್ತಕ ಬರೆಯದ ಶರ್ಮರಿಗೆ ತಾವಾಗಿಯೇ ಹಲವಾರು ಪ್ರಶಸ್ತಿಗಳು ಬಂದಿವೆ.

1967 - ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ – 'ಕರ್ನಾಟಕದ ಶಬ್ದಾನುಶಾಸನದ ನಲ್ನುಡಿ ಕನ್ನಡ'.

1979 – ಜೈನ ಸಾಹಿತ್ಯ ಭೂಷಣ.

1981 – 1) ರಾಜ್ಯ ಸಾಹಿತ್ಯ ಸಂಸ್ಕೃತ ಅಕಾಡೆಮಿ ಪ್ರಶಸ್ತಿ.

2) ಶ್ರೇಷ್ಠ ಅಧ್ಯಾಪಕರೆಂಬ ರಾಜ್ಯ ಪ್ರಶಸ್ತಿ.

1983 – ರಾಜಸಾಹಿತ್ಯ ಅಕಾಡೆಮಿ ವಾರ್ಷಿಕ ಪ್ರಶಸ್ತಿ.

1993 – ಸರ್ಕಾರದಿಂದ ಮಾಸಿಕ ರೂ.500 ಧನ ಸಾಹಾಯ.

ಜಿ.ಪಿ.ರಾಜರತ್ನಂ ಅವರಂತೆ ಜೈನಕಥೆಗಳನ್ನು ಕನ್ನಡಕ್ಕೆ ಕೊಟ್ಟವರಲ್ಲಿ ಶರ್ಮರು ಪ್ರಮುಖರಾಗಿದ್ದಾರೆ. ಅಷ್ಟವಿಧಾರ್ಚನೆ ಕಥೆಗಳು, ಭಕ್ತಾಮರ ಕಥೆಗಳು, ಜಂಬೂಸ್ವಾಮಿಯ ಕಥೆಗಳು, ಜೈನ ಸಾಹಿತ್ಯ ಕಥೆಗಳು, ಜನಪ್ರಿಯ ಕಥಾ ಸಂಗ್ರಹಗಳಾಗಿವೆ. ಮಕ್ಕಳ ನಾಟಕಗಳಲ್ಲಿ ಮಾಸ್ಟರ ಮಗಳು, ದುರ್ದೈವಿ ದಾರಾಶಹ, ಶಾಂತಿಸಂದೇಶ ನಾಟಕಗಳು ಪ್ರಸಾರವಾಗಿವೆ.

ತ್ಯಾಗವೀರ ಬಾಹುಬಲಿ, ಸುಭಾಷ್‌ಚಂದ್ರ, ಅಮರ ನೆಹರೂ ಮೊದಲಾದ ಜೀವನ ಚರಿತ್ರೆಗಳನ್ನು ವಿದ್ಯಾರ್ಥಿಗಳಿಗಾಗಿ ಬರೆದಿದ್ದಾರೆ. ಹೀಗೆ ಮಕ್ಕಳ ಸಾಹಿತ್ಯಕ್ಕೆ ಅವರು ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಜೈನರಾಮಾಯಣ, ಜೈನಭಾರತ, ವಚನಭಾರತ, ವಚನರಾಮಾಯಣಗಳಂತೂ ಸರಳ ಸುಂದರ ರಚನೆಗಳಾಗಿವೆ. ಹೀಗೆ ಶ್ರೇಷ್ಠ ಸಾಹಿತಿಯಾಗಿ, ಶಿಕ್ಷಕ, ವಿದ್ವಾಂಸರಾಗಿ, ಶಾಸ್ತ್ರವಿದರಾಗಿ, ಅನೇಕರಿಗೆ ಶಾಸ್ತ್ರದಾನ, ವಿದ್ಯಾದಾನ ಮಾಡಿದ ಸಾತ್ವಿಕ ಜೈನ ಕಣ್ಮಣಿ ಭುವನಹಳ್ಳಿ ಪದ್ಮನಾಭ ಶರ್ಮರು. ತಮ್ಮ ಅಮೋಘ ಸಾಹಿತ್ಯಸೇವೆಯನ್ನು ಮಾಡಿ, 26.11.1924ರಲ್ಲಿ ಜನಿಸಿದ ಅವರು 27.7.1995ರಲ್ಲಿ ತಮ್ಮ 71ನೇ ವಯಸ್ಸಿನಲ್ಲಿ ಜಿನಪಾದ ಸೇರಿ ಅಮರರಾದರು.

## ಈ. ಚಿತ್ರ ಕಾವ್ಯ

### ಸ್ವರೂಪ:

ಭುವನಹಳ್ಳಿ ಪದ್ಮನಾಭ ಶರ್ಮರ ಅನುವಾದಿತ ಕೃತಿ 'ಪ್ರಾಣಪ್ರಿಯ ಕಾವ್ಯ'ವು ಚಿತ್ರ ಕಾವ್ಯದ ಒಂದು ಬಗೆಯಾದ ಸಮಸ್ಯಾಪೂರ್ಣ ಕಾವ್ಯವಾಗಿದೆ. ಚಿತ್ರ ಕಾವ್ಯದ ಸ್ವರೂಪ, ಲಕ್ಷಣ ಹಾಗೂ ವರ್ಗೀಕರಣಗಳ ಮೊದಲಾದ ವಿವರಗಳು ಹೀಗಿವೆ:

ಕಾವ್ಯದ ಹಲವು ಪ್ರಕಾರಗಳಲ್ಲಿ ಚಿತ್ರ ಕಾವ್ಯವೂ ಒಂದು. ಚಿತ್ರ ಎಂಬ ಪದಕ್ಕೆ ಹಲವು ಅರ್ಥಗಳಿವೆ. ಅವುಗಳಲ್ಲಿ 'ವಿಸ್ಮಯವನ್ನು ಉಂಟುಮಾಡುವ' 'ಆಶ್ಚರ್ಯಜನಕವಾದುದು' ಎಂಬ ಅರ್ಥವನ್ನು ಇಲ್ಲಿ ಗ್ರಹಿಸಬೇಕಾಗುತ್ತದೆ. ಕಾವ್ಯವು ರಸಾತ್ಮಕವಾದ ವಾಕ್ಯಗಳಿಂದ ಕೂಡಿದ್ದು ಸಹೃದಯನಲ್ಲಿ ಆಹ್ಲಾದವನ್ನುಂಟುಮಾಡುತ್ತದೆ. ಆದ್ದರಿಂದಲೇ ವಿದ್ವಾಂಸರು "ಆಶ್ಚರ್ಯ ಕವಿತ್ವಾತ್ ಚಿತ್ರಮ್"[4] ಎಂಬಂತಹ ಸೂಚನೆಗಳನ್ನು ನೀಡಿದ್ದಾರೆ. ಆಧುನಿಕರೂ ಈ ಅರ್ಥವನ್ನೇ (ಸಾಮಾನ್ಯವಾಗಿ) ಪುರಸ್ಕರಿಸುತ್ತಾರೆ.

ಚಿತ್ರ ಕಾವ್ಯವನ್ನು ವಿವಿಧ ಕೋಶಗಳು, ವಿದ್ವಾಂಸರು ಈ ರೀತಿ ವ್ಯಾಖ್ಯಾನಿಸಿದ್ದಾರೆ:

1. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು [5] ಚಿತ್ರ ಕಾವ್ಯಕ್ಕೆ ಈ ರೀತಿಯ ವಿವರಣೆಯನ್ನು ನೀಡುತ್ತದೆ:

ಚಿತ್ರ ಕಾವ್ಯ [ಕಾ.ಮಾ.] ವ್ಯಂಗ್ಯಾರ್ಥ ರಹಿತವಾದ ಕಾವ್ಯ ರಚನೆ: ರೀತಿ ಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು. ಒಂದು ಪಕ್ಷ ಕಾವ್ಯವಾದರೂ ಚಿತ್ರ ಕಾವ್ಯವಾಗಬಹುದೇ ಹೊರತು ಉತ್ತಮ ಕಾವ್ಯವಾಗಲಾರದು. (ಕೈಪಿಡಿ 173); ವ್ಯಂಗ್ಯಾರ್ಥ ಶೂನ್ಯವಾದ 'ಚಿತ್ರ ಕಾವ್ಯ'ವೆಂಬ ಜಾತಿಯನ್ನು ಕುರಿತು ಹೇಳಿದ್ದಾರೆ.

2. ಜಿ.ಎಸ್.ಶಿವರುದ್ರಪ್ಪ ಹಾಗೂ ಕೆ.ವಿ.ನಾರಾಯಣರವರ 'ಕಾವ್ಯಾರ್ಥ ಪದ ಕೋಶ' ದಲ್ಲಿ ಚಿತ್ರ ಕಾವ್ಯವನ್ನು ಹೀಗೆ ವಿವರಿಸಿದ್ದಾರೆ:

"ಕಾವ್ಯದಲ್ಲಿ ವ್ಯಂಗ್ಯಾರ್ಥವು ಪ್ರಧಾನವಾಗಿಲ್ಲದಿದ್ದರೆ [6] ಹೋಗಲಿ; ಗೌಣವಾಗಿಯೂ ವ್ಯಕ್ತವಾಗದಿದ್ದರೆ ಅದು 'ಚಿತ್ರ' ಎನಿಸಿಕೊಳ್ಳುತ್ತದೆ. ಆ ಕಾವ್ಯವೇ 'ಚಿತ್ರ ಕಾವ್ಯ'. ಇದು ಅಧಮ ಕಾವ್ಯ.

ವ್ಯಂಗ್ಯವಾದ ಶಬ್ದಾಲಂಕಾರವು ಶಬ್ದ ಚಿತ್ರಕ್ಕೂ <u>ವ್ಯಂಗ್ಯ ಶೂನ್ಯವಾದ ಅರ್ಥಾಲಂಕಾರವು</u> ವಾಚ್ಯ ಚಿತ್ರಕ್ಕೂ ವಿಷಯವಾಗುತ್ತದೆ.

**ಲಕ್ಷಣ:**

'ಚಿತ್ರ'ದ ಲಕ್ಷಣವನ್ನು ಕುರಿತು ಹೇಳುವಾಗ 'ಚಿತ್ರವನ್ನು ಆಕೃತಿಗಳಲ್ಲಿ ಅಡಗಿಸಿ ಇಲ್ಲವೆ ಅಳವಡಿಸಿ ತೋರಿಸುವ ಅಕ್ಷರ ಸಮುದಾಯದ ಕವಿತ್ವದ ಪದ್ಧತಿ' (ವರ್ಣಾನಾಂ ಖಡ್ಗಾದ್ಯಾಕೃತಿ ಹೇತುತ್ವೇ ಚಿತ್ರಮ್) (7) ಎಂದು ಹೇಳಿದ್ದಾರೆ.

ಒಂದು ಕಾವ್ಯ ಚಿತ್ರ ಕಾವ್ಯವೆಂದು ಹೇಳಲು ಆ ಕಾವ್ಯವು

(1) ಒಂದು ಉದ್ದೇಶವನ್ನು ಲಕ್ಷದಲ್ಲಿಟ್ಟುಕೊಂಡು, ಅದಕ್ಕೆ ಹೊಂದುವಂತೆ ಗೊತ್ತಾದ ಛಂದಸ್ಸುಗಳನ್ನು ಆಯ್ದುಕೊಂಡು ಅವನ್ನು ಚಮತ್ಕಾರಜನಕವಾಗುವಂತೆ ವಿಶಿಷ್ಟ ರೀತಿಯಲ್ಲಿ ಬಳಸುವುದು.

(2) ವಿಶಿಷ್ಟ ರೀತಿಯಲ್ಲಿ ಅಕ್ಷರಗಳನ್ನು ಇಲ್ಲವೆ ಅಕ್ಷರಗಳನ್ನುಳ್ಳ ಶಬ್ದಗಳನ್ನು ಸಂಯೋಜಿಸಿ ಪದ್ಯಗಳನ್ನು ರಚಿಸುವುದು; ರಚಿಸಿದ ಪದ್ಯಗಳ ಮೂಲಕ ಗೊತ್ತಾದ ವಸ್ತು ಅಥವಾ ಮಾದರಿಗಳನ್ನು ಹೋಲುವ 'ಪದ್ಯ ಚಿತ್ರ'ಗಳನ್ನು ಎಂದರೆ ಆಕಾರಗಳನ್ನೂ ಬಂಧಗಳನ್ನೂ ರೂಪಿಸುವುದು.

(3) 'ಶಬ್ದ' ಅಥವಾ 'ಅರ್ಥ'ಗಳಲ್ಲಿ ಉದ್ದೇಶ ಪೂರ್ವಕವಾಗಿ ಚಮತ್ಕಾರ ಹುಟ್ಟಿಸುವ ಪದ್ಯಗಳನ್ನು ರಚಿಸಿ ವಿಸ್ಮಯ ನಿಗೂಢತೆಗಳಿಗೆ ಅವಕಾಶ ಮಾಡುವುದು".

ಈ ಚಿತ್ರಕಾವ್ಯದ ಲಕ್ಷಣಗಳನ್ನು ಗಮನಿಸಿದರೆ 'ಶಬ್ದ, ಅರ್ಥ ಹಾಗೂ ಶಬ್ದಾರ್ಥಗಳೆರಡನ್ನೂ ಅಲಂಕರಿಸುವುದರಿಂದ ಶಬ್ದ ಚಿತ್ರ, ಅರ್ಥ ಚಿತ್ರ ಹಾಗೂ ಉಭಯ ಚಿತ್ರಗಳೆಂದು ಮೂರು ಭಾಗಗಳಾಗಿ ವಿಂಗಡಿಸಬಹುದು.[8]

ಶ್ರೀಧರ ಸ್ವಾಮಿಗಳ ಭಾಗವತದ ಟೀಕೆಯಲ್ಲಿ [9] ಚಿತ್ರ ಕಾವ್ಯದ ಬಗೆಗಳನ್ನು ಈ ರೀತಿ ಹೇಳಿದ್ದಾರೆ: (1) ಪ್ರಹೇಲಿಕಾ, (2) ಪ್ರತಿಮಾಲಾ, (3) ದುರ್ವಾಚಕ ಯೋಗ, (4) ಕಾವ್ಯ ಸಮಸ್ಯಾಪೂರಣ, (5) ಅಕ್ಷರ ಮುಷ್ಟಿಕಾ ಕಥನ, (6) ಮ್ಲೇಚ್ಛಿತ ವಿಕಲ್ಪ, (7) ಸಂಪಾಠ್ಯ, (8) ಮಾನಸೀ.

ಇವುಗಳಲ್ಲಿ ಸಮಸ್ಯಾಪೂರಣ ಎಂಬುದರಲ್ಲಿ ಶ್ಲೋಕದ ಕೊನೆಯ ಪಾದವನ್ನು ಮೊದಲೇ ಕೊಟ್ಟು, ಆಮೇಲೆ ಅದರ ಮೊದಲ ಮೂರು ಪಾದಗಳನ್ನು ರಚಿಸಲು ತಿಳಿಸುವುದು.

## ಸಮಸ್ಯಾಪೂರಣ ಕಾವ್ಯದ ವರ್ಗೀಕರಣ

### ಅರ್ಥಾನುಸಾರ:

ಕಾವ್ಯ ಸಮಸ್ಯಾಪೂರಣವನ್ನು ಹಲವು ಬಗೆಗಳಲ್ಲಿ ವರ್ಗೀಕರಿಸುವುದು ಉಂಟು. ಅರ್ಥಾನುಸಾರವಾಗಿ ಅರ್ಥಚ್ಛಲ, ಶಬ್ದಚ್ಛಲ, ಉಭಯಚ್ಛಲ ಎಂದು ವಿಭಾಗಿಸುವುದು ಒಂದು ರೀತಿಯ ವರ್ಗೀಕರಣ [10].

ಸಂಸ್ಕೃತದಲ್ಲಿ ಏಕಪಾದ ಸಮಸ್ಯೆಯಲ್ಲದೆ ತ್ರಿಪಾದ ಸಮಸ್ಯೆಗಳೂ ಉಂಟು. ಆದರೆ ಕನ್ನಡದಲ್ಲಿ ಇರುವುದೆಲ್ಲ ಏಕಪಾದ ಪೂರಣ ಸಮಸ್ಯೆಗಳೇ ಎನ್ನಬಹುದು. ತ್ರಿಪಾದ ಸಮಸ್ಯೆಗಳೆಂದರೆ ಮೂರುಪಾದಗಳು ಮೂರು ಗ್ರಂಥಗಳ ಸಾಲಾಗಿದ್ದು ಅದಕ್ಕೆ ಪೂರಕವಾಗಿ ಮೊದಲ ಸಾಲು ಸೇರಿಸುವುದು. ಇದು ತ್ರಿಪಾದ ಸಮಸ್ಯಾಕಾವ್ಯಗಳ ಲಕ್ಷಣವಾಗಿದೆ.

ಇನ್ನೊಂದು ರೀತಿಯಲ್ಲಿ ಹೇಳಬಹುದಾದರೆ. [11] ಬಿಡಿ ಪದ್ಯಗಳ ಅಂತ್ಯಪಾದ ಕೊಟ್ಟು ಮೊದಲ ಮೂರು ಪಾದಗಳಿಂದ ಸಮಸ್ಯಾ ಪರಿಹಾರ ಮಾಡುವುದು ಒಂದು ಬಗೆಯಾದರೆ ಒಂದು ಕಾವ್ಯದ ಕೊನೇ ಭಾಗಗಳನ್ನು ಕೊಟ್ಟು ಪಾದ ಪೂರಣಗೊಳಿಸಿ ಇನ್ನೊಂದು ಕಾವ್ಯ ರಚಿಸುವುದು ಇನ್ನೊಂದು ಬಗೆ. ಹೀಗೆ ಕಾವ್ಯ ಸಮಸ್ಯಾಪೂರಣ ಪದ್ಯಗಳು, (ಬಿಡಿಪದ್ಯಗಳು) ಮುಕ್ತಕ ಸಮಸ್ಯಾಪೂರಣ ಪದ್ಯಗಳು ಎಂದು ಎರಡು ಬಗೆಯಾಗಿ ವರ್ಗೀಕರಿಸಬಹುದು.

### ಪಾದ ಸಂಖ್ಯಾನುಸಾರ:

ಕಾವ್ಯ ಸಮಸ್ಯಾಪೂರಣಗಳಲ್ಲಿ ಹಲವು ಬಗೆಗಳವೆ. ಅರ್ಥದ ಹಿನ್ನೆಲೆಯಲ್ಲಿ ಮೂರು ಬಗೆಗಳನ್ನು ಕಾಣುವಂತೆಯೇ ಪಾದಗಳಪೂರಣದ ಹಿನ್ನೆಲೆಯಲ್ಲಿಯೂ ಮೂರು ಬಗೆಗಳನ್ನು ಕಾಣಬಹುದು. ಪಾರ್ಶ್ವಾಭ್ಯುದಯ ಕಾವ್ಯದಲ್ಲಿ ಈ ಮೂರು ರೂಪಗಳಲ್ಲಿ ವರ್ಗೀಕರಿಸಿರುವುದು ಪಾದಪೂರ್ಣ ಸಮಸ್ಯಾವರ್ಗಕ್ಕೆ ಸೇರುತ್ತದೆ.[12] (1) ಪಾದವೇಷ್ಟಿತ (ಒಂದು ಸಾಲನ್ನು ನೀಡಿ ಉಳಿದ ಸಾಲನ್ನು ಪೂರೈಸುವುದು) (2) ಅರ್ಧವೇಷ್ಟಿತ (ಎರಡು ಸಾಲುಗಳನ್ನು ನೀಡಿ ಉಳಿದ ಸಾಲುಗಳನ್ನು ಪೂರೈಸುವುದು)

(3) ಆಂತರಿಕವೇಷ್ಟಿತ (ಕೊಟ್ಟ ಎರಡು ಸಾಲುಗಳ ನಡುವೆ ಉಳಿದ ಎರಡು ಸಾಲುಗಳನ್ನು ಪೂರೈಸುವುದು)

ಮೇಘದೂತವು ಅನೇಕ ಸಮಸ್ಯಾಪೂರಣ ಕಾವ್ಯಗಳಿಗೆ ಆಧಾರವಾಗಿರುವಂತೆ, ಜೈನ ಕಾವ್ಯಗಳಲ್ಲಿ ಪ್ರಸಿದ್ಧವಾದ ಭಕ್ತಾಮರ ಸ್ತೋತ್ರವು ಅನೇಕ ಸಮಸ್ಯಾಪೂರಣ ಕಾವ್ಯಗಳಿಗೆ ಆಧಾರವಾಗಿದೆ. ಅವುಗಳಲ್ಲಿ ಪ್ರಾಣಪ್ರಿಯ ಕಾವ್ಯವು ವಿಶಿಷ್ಟವಾದುದು.

**ಸ್ವರೂಪ :**

ನಾಲ್ಕು ಪಾದಗಳಲ್ಲಿರುವ ಪದ್ಯದ ಒಂದು ಪಾದವನ್ನು (ಕೆಲವೊಮ್ಮೆ ಅನುಷ್ಟಪ್ ಶ್ಲೋಕದಲ್ಲಿ ಎರಡು ಪಾದಗಳನ್ನು) ಸಮಸ್ಯೆಯಾಗಿ ಕೊಡಲಾಗುತ್ತದೆ. ಆ ಪಾದವು ಅನ್ವಯ ಸಾಮಂಜಸ್ಯವಾಗಿರದೆಯೇ ಅಸಂಭವವಾಗಿಯೇ ಭಾಸವಾಗಬಹುದು. ಆಗ ಅವಧಾನಿಯು ಆ ಪಾದವನ್ನು ಸ್ವೀಕರಿಸಿ ಅದನ್ನು ತದನುಕೂಲ ವೃತ್ತದಲ್ಲಿಯೇ ಮತ್ತೆ ಮೂರು ಪಾದಗಳೊಡನೆ ಹೊಂದಿಸಿ ಒಟ್ಟಾರೆ ಓದಿ ಅದರಲ್ಲಿಯ ಅಸಾಮುಂಜಸ್ಯವು ಇಲ್ಲವಾಗುವಂತೆ ಮಾಡುತ್ತಾನೆ. ಇದೇ ಸಮಸ್ಯಾ ಪೂರ್ತಿ ಅಥವಾ ಸಮಸ್ಯಾ ಪೂರಣ". ಇಲ್ಲೆಲ್ಲ ವೃತ್ತ – ವ್ಯಾಕರಣ – ಭಾಷೆಗಳ ಸಮಗ್ರ ಸಮ್ಮಿಲನ ಅವಶ್ಯ".

## ಉ. ಅವಧಾನ ಕಲೆಗಳಲ್ಲಿ ಒಂದು ಅಂಗ [14]

"ಅವಧಾನದ ರಸಘಟ್ಟಗಳಲ್ಲಿ ಸಮಸ್ಯೆಗೇ ಅಗ್ರ ತಾಂಬೂಲ. ಇದರ ಸೌಂದರ್ಯ ಅತಿಕೌತುಕಜನಕವಾದದ್ದು ಸಹೃದಯರ ಕುತೂಹಲವನ್ನು ಕಡೆಯವರೆಗೂ ಹಿಡಿದಿಟ್ಟು ಆಹ್ಲಾದ ಪಡಿಸುವುದೇ ಇದರ ವೈಶಿಷ್ಟ್ಯ. ಪತ್ತೇದಾರಿ ಕಥೆಗಳ ಅಂತ್ಯದಂತೆ ಊಹಾತೀತವಾದ ತಿರುವನ್ನು ಪಡೆಯುವುದರಲ್ಲಿಯೇ ಇದರ ಸಾರ್ಥಕ್ಯ".

## ಊ. ಅರವತ್ತನಾಲ್ಕು ಕಲೆಗಳಲ್ಲಿ ಒಂದು

ಕಾವ್ಯ ಸಮಸ್ಯಾಪೂರ್ಣ ಕಲೆಯು ಚತುಷಷ್ಟಿ ಕಲೆಗಳಲ್ಲಿ ಒಂದು. ಕನ್ನಡ ಸಾಹಿತ್ಯ ನಿಘಂಟುವಿನಲ್ಲಿ (ಕನ್ನಡ ಸಾಹಿತ್ಯ ಪರಿಷತ್ತು. 1977 ಸಂಪುಟ 3) ಮತ್ತು ವಾತ್ಸಾಯನನ ಕಾಮಸೂತ್ರದಲ್ಲಿ ಪ್ರಸ್ತಾಪವಾಗಿರುವ ಚೌಷಷ್ಠಿ ಕಲೆಗಳ ಪಟ್ಟಿಯಲ್ಲಿ (ಅರವತ್ತನಾಲ್ಕು ಕುಶಲವಿದ್ಯೆಗಳಲ್ಲಿ) ಮೂವತ್ತಮೂರನೆಯದು– ಕಾವ್ಯಸಮಸ್ಯಾಪೂರಣ ಕಲೆ ಎಂದು ವಿವರವನ್ನು ನೀಡುತ್ತದೆ.

ಪ್ರೊ. ಟಿ.ಎಸ್. ಸತ್ಯವತಿಯವರು ತಮ್ಮ 'ಚತುಷಷ್ಟಿ ಕಲೆ'[15] ಎಂಬ ಕೃತಿಯಲ್ಲಿ ಸಮಸ್ಯಾಪೂರಣ ಕಾವ್ಯವನ್ನು ಈ ರೀತಿ ವಿವರಿಸಿದ್ದಾರೆ:

"ಕವಿತೆಯ ರಚನೆಯ ಕಲೆ ಇದು. ಶ್ಲೋಕದ ಕೊನೆಯ ಪಾದವು ಮೊದಲೇ ಕೊಡಲಾಗಿದ್ದು ಅದರ ಮೊದಲ ಮೂರು ಪಾದಗಳನ್ನು ರಚಿಸಿ ನಾಲ್ಕೂ ಪಾದಗಳು ಕೂಡಿ ಸಮಂಜಸ ಅರ್ಥ ಬರುವಂತೆ ಮಾಡುವುದು" ಎಂದು ಹೇಳಿದ್ದಾರೆ.

ಮ.ಶ್ರೀಧರಮೂರ್ತಿಯವರು ತಮ್ಮ 'ಅರವತ್ತನಾಲ್ಕು ಕಲೆಗಳು' [16] ಎಂಬ ಕೃತಿಯಲ್ಲಿ "ಇದು ಪಂಡಿತ ರಂಜನೆಯ ಕಲೆ. ಸಮಸ್ಯಾತ್ಮಕವಾದ ಶ್ಲೋಕಪಾದವನ್ನು ಒಬ್ಬರು ಹೇಳಿದಾಗ ಇನ್ನೊಬ್ಬರು ಆ ಸಮಸ್ಯೆಯನ್ನು ಪರಿಹರಿಸುವಂತೆ ಶ್ಲೋಕವನ್ನು ಪೂರ್ಣವಾಗಿಸುವ ಕಲೆ ಇದು. ಸಾಹಿತ್ಯಾಭಿಮಾನಿಗಳೂ ವಿದ್ವತ್ ಪಕ್ಷಪಾತಿಗಳೂ ಆಗಿದ್ದ ಪೂರ್ವಕಾಲದ ರಾಜರ ಆಸ್ಥಾನಗಳಲ್ಲಿದ್ದ ಪಂಡಿತರು ಈ ಕಲೆಯನ್ನು ಒಂದು ಹವ್ಯಾಸವಾಗಿ ಬಳಸಿಕೊಳ್ಳುತ್ತಿದ್ದರಂತೆ. ಕವಿಯ ಸೃಷ್ಟ್ಯಾತ್ಮಕ ಶಕ್ತಿ, ಪ್ರತಿಭೆ, ಛಂದೋಜ್ಞಾನ, ಲೋಕಜ್ಞಾನಗಳನ್ನು ಪರೀಕ್ಷಿಸಲು ಕಾವ್ಯ ಸಮಸ್ಯೆಗಳು ಸಾಧಕವಾಗಿದ್ದವು" ಎಂದು ಹೇಳಿದ್ದಾರೆ.

## ಋ. ಸಂಸ್ಕೃತದಲ್ಲಿ ಸಮಸ್ಯಾಪೂರ್ಣ ಕಾವ್ಯಗಳು
## (ಸಂಸ್ಕೃತದಲ್ಲಿ ದೂತ ಕಾವ್ಯಗಳು)

ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸನ 'ಮೇಘದೂತ'ದ ನಂತರ 'ದೂತ ಕಾವ್ಯ' ಹಾಗೂ 'ಸಂದೇಶ ಕಾವ್ಯ' ಎಂಬ ಎರಡು ಬಗೆಯ ಕಾವ್ಯಗಳು ಪ್ರಚಲಿತಗೊಂಡವು. ಈ ಸಾಹಿತ್ಯಪ್ರಕಾರಗಳಲ್ಲಿ ಹಲವಾರು ದೂತ ಕಾವ್ಯಗಳು ಸಮಸ್ಯಾ ಪೂರಣ ಕಾವ್ಯಗಳಾಗಿವೆ. ದೂತಕಾವ್ಯವು ಸಾಮಾನ್ಯವಾಗಿ ಲೌಕಿಕ ಸಾಹಿತ್ಯವನ್ನು ಒಳಗೊಂಡದ್ದಾಗಿರುತ್ತದೆ. [13]

ಜೈನ ಕವಿಗಳನ್ನು ಕಾಳಿದಾಸನ 'ಮೇಘದೂತ' ಕಾವ್ಯದ ಶೈಲಿಯು ಬಹಳ ಆಕರ್ಷಿಸಿತು. ಈ ಕಾವ್ಯದ ಸಮಸ್ತ ಪದ್ಯಗಳನ್ನೂ ಪೂರ್ಣಮಾಡಿ ನೂತನವಾದ ಕಾವ್ಯಗಳನ್ನು ರಚಿಸಿದರು. ಇವರಲ್ಲಿ ಕೆಲವರು ಮೇಘದೂತದ ಶ್ಲೋಕಗಳ ಕೊನೆಯ ಸಾಲುಗಳನ್ನು ಸಮಸ್ಯಾ ರೂಪದಿಂದ ಸ್ವೀಕರಿಸಿ ಅವನ್ನು ತಮ್ಮ ದೃಷ್ಟಿಯಿಂದ ಪೂರ್ಣ ಮಾಡಿದರು. ಆದರೆ ಆಚಾರ್ಯ ಜಿನಸೇನರು ಮಾತ್ರ ಮೇಘದೂತದ ಎಲ್ಲಾ ಪದ್ಯಗಳ ಎಲ್ಲಾ ಚರಣಗಳನ್ನು ಪೂರ್ತಿಮಾಡಿದರು. ಈ ಕೆಳಕಂಡ ಪ್ರಮುಖ ಜೈನ ಕಾವ್ಯಗಳು ಮೇಘದೂತದ ಸಮಸ್ಯಾಪೂರ್ತಿ ಕಾವ್ಯಗಳಾಗಿವೆ:

(1) ಪಾರ್ಶ್ವಾಭ್ಯುದಯ – ಇದರ ಕರ್ತೃ ಎರಡನೆಯ ಜಿನಸೇನ
(2) ವಿಕ್ರಮ ಕವಿಯ – ನೇಮಿದೂತ
(3) ಶೀತಲದೂತ
(4) ಮೇರುತುಂಗನ – ಜೈನ ಮೇಘದೂತ
(5) ವಾದಿ ಚಂದ್ರನ – ಪವನದೂತ

(6) ವಿಮಲ ಕೀರ್ತಿಯ – ಚಂದ್ರದೂತ

(7) ಮೇಘವಿಜಯನ – ಮೇಘ ಸಮಸ್ಯಾಲೇಖ

(8) ಅಜ್ಞಾತ ಕವಿಯ – ಚೇತೋದೂತ ಹಾಗೂ ಜೈನೇತರ ಕವಿಗಳಾದ (1) ಅವಧೂತ ರಾಮಯೋಗಿಯ ಸಿದ್ಧ ದೂತ ಹಾಗೂ (2) ಆಧುನಿಕ ಕವಿ ನಿತ್ಯಾನಂದ ಶಾಸ್ತ್ರಿಗಳ ಹನುಮದ್ದೂತ ಎಂಬುವು ಪ್ರಸಿದ್ಧವಾಗಿವೆ.

ಇವುಗಳಲ್ಲಿ ವಿಕ್ರಮ ಕವಿಯ ನೇಮಿದೂತ ಕಾವ್ಯ ಹಾಗೂ ಮಹಾಕವಿ ಮೇರುತುಂಗನ ಜೈನ ಮೇಘದೂತ ಕಾವ್ಯಗಳು ನೇರವಾಗಿ 'ಪ್ರಾಣಪ್ರಿಯ' ಕಾವ್ಯದ ಕಥಾವಸ್ತುವೇ [ನೇಮಿನಾಥನು ರಾಜೀಮತಿಯಿಂದ ದೂರವಾಗುವ ಪ್ರಸಂಗ] ಆಗಿದೆ. ಶೀತಲದೂತವು 'ಪ್ರಾಣಪ್ರಿಯ' ಕಾವ್ಯವನ್ನು ಹೋಲುವಂತಹ ಕಥಾವಸ್ತುವನ್ನು ಹೊಂದಿದೆ.

ಈ ಎರಡೂ ಕಾವ್ಯಗಳಲ್ಲದೆ 'ಜೈನ ಮೇಘದೂತ' ಕಾವ್ಯವೂ ಸಹ ಒಂದು ಸಮಸ್ಯಾ ಪೂರ್ಣ ಕಾವ್ಯವಾಗಿದ್ದು ಇದೂ ಸಹ 22ನೇ ತೀರ್ಥಂಕರನಾದ ನೇಮಿನಾಥ ಮತ್ತು ರಾಜೀಮತಿಯರ ವಿಷಯವನ್ನು ಕುರಿತದ್ದೇ ಆಗಿದೆ.

ಹೀಗೆ ಸಮಸ್ಯಾ ಪೂರ್ಣ ಕಾವ್ಯಗಳ ಪರಂಪರೆಗೆ ಸೇರುವ ಮತ್ತೊಂದು ಸಂಸ್ಕೃತ ಗ್ರಂಥವೆಂದರೆ ರತ್ನಸಿಂಹ ಮುನಿಗಳ ಪ್ರಾಣಪ್ರಿಯ ಕಾವ್ಯ. ಇದೊಂದು ಸಮಸ್ಯಾಪೂರ್ಣ ಕಾವ್ಯವಾಗಿದ್ದು ಈ ಕಾವ್ಯದಲ್ಲಿನ ಪದ್ಯದ ಮೊದಲ ಮೂರು ಪಾದಗಳು ಶ್ರೀಮಾನತುಂಗಾಚಾರ್ಯರ "ಭಕ್ತಾಮರ" ಸ್ತೋತ್ರದ್ದಾಗಿದೆ. ಇವರಿಗಿಂತ ಪೂರ್ವ ಕವಿಯಾದ ಆಚಾರ್ಯ ಸುಮಂತ ಭದ್ರರೂ ಸಹ ಜಿನಶತಕವೆಂಬ ಕಾವ್ಯವನ್ನು ಚಿತ್ರಾಲಂಕಾರದಲ್ಲಿ ರಚಿಸಿದ್ದಾರೆ.

## ಎ. 'ಪ್ರಾಣಪ್ರಿಯ ಕಾವ್ಯ'

## 'ಪ್ರಾಣಪ್ರಿಯ ಕಾವ್ಯ'ವೆಂದು ಹೆಸರು ಬರಲು ಕಾರಣ:

ಸಂಸ್ಕೃತದಲ್ಲಿ ಕಾವ್ಯಗಳಿಗೆ ಹೆಸರಿಡಲು ಹಲವು ಸಂಪ್ರದಾಯಗಳಿವೆ. ಅವುಗಳು:

1. ವಿಷಯ ನಿರ್ದೇಶಾತ್ಮಕವಾಗಿ ಹೆಸರಿಡುತ್ತಾರೆ. ಉದಾ: ತತ್ವಾರ್ಥ ಸೂತ್ರ

2. ಲೋಕಪ್ರಿಯ ಪದಾಂತಗಳ ಸೂಚಕವಾಗಿ ಹೆಸರಿಡುತ್ತಾರೆ. ಬಿಂದು, ಸಿಂಧು, ಮುಖ, ವಾರ್ತಿಕ ತರಂಗಿಣಿ, ಸಮುಚ್ಚಯ ಇತ್ಯಾದಿ. ಉದಾ: ತತ್ವಬಿಂದು, ಧರ್ಮಸಿಂಧು, ಪರೀಕ್ಷಾಮುಖ, ಶ್ಲೋಕವಾರ್ತಿಕ, ಶೃಂಗಾರ ತರಂಗಿಣೀ, ಶಿಕ್ಷಾ ಸಮುಚ್ಚಯ ಇತ್ಯಾದಿ.

3. ಅಂತ್ಯಪದಾವ ಬೋಧಕ: ಮೇಘದೂತ, ಹಂಸದೂತ ಇತ್ಯಾದಿ

4. ಪ್ರಾರಂಭಿಕ ಪದಾಂತ ಬೋಧಕ: (ಕಾವ್ಯದ ಪ್ರಾರಂಭದ ಪದದ ಹೆಸರಿಡುವುದು. ಉದಾ: ಭಕ್ತಾಮರ ಸ್ತೋತ್ರ, ಕಲ್ಯಾಣಮಂದಿರ ಸ್ತೋತ್ರ ಇತ್ಯಾದಿ.

ಪ್ರಾಣಪ್ರಿಯ ಕಾವ್ಯ ಈ ಬಗೆಯ ಕಾವ್ಯ. ಕಾವ್ಯದ ಪ್ರಾರಂಭದ ಪದವೇ ಕಾವ್ಯದ ಹೆಸರಾಗಿದೆ. ಕಾವ್ಯದ ಪ್ರಾರಂಭ ಹೀಗಿದೆ:

> ಪ್ರಾಣಪ್ರಿಯಂ ನೃಪಸುತಾಕಿಲರೈವತಾದ್ರಿ
> ಶೃಂಗಾರ ಸಂಸ್ಥಿತಮವೋಚದಿತಿ ಪ್ರಗಲ್ಭಮ್
> ಅಸ್ಮಾದೃಶಾ ಮುದಿತ ನೀಲ ವಿಯೋಗ ರೂಪೇ,
> ವಾಲಂಬನಂ ಭವಜಲೇ ಪತತಾಂಜನಾನಾಂ
> (ಭಕ್ತಾಮರ ಸ್ತೋತ್ರದ ಕೊನೆಯ ಪಾದ)
> 'ಪದ್ಮನಾಭಶರ್ಮರ ಭಕ್ತಾಮರಸ್ತೋತ್ರದೀಪಿಕೆಯಿಂದ'

ಸಂಸ್ಕೃತ 'ಪ್ರಾಣಪ್ರಿಯ ಕಾವ್ಯ'ವು ಪ್ರಾಣಪ್ರಿಯ ಎಂಬ ಪದದಿಂದಲೇ ಆರಂಭವಾಗುತ್ತದೆ. ಆದರೆ, ಪದ್ಮನಾಭ ಶರ್ಮರ ಅನುವಾದವು 'ಈ ವಿಯೋಗದ ದುಃಖ' ಎಂದು ಆರಂಭವಾದರೂ 'ಪ್ರಾಣಪ್ರಿಯ ಕಾವ್ಯ'ವೆಂದೇ ಶೀರ್ಷಿಕೆಯನ್ನು ನೀಡಿದ್ದಾರೆ. ಮೂಲದಲ್ಲಿ ಬಂದಿರುವ 'ಪ್ರಾಣಪ್ರಿಯ' ಪದ ಕಾವ್ಯದ ಕಥಾವಸ್ತುವನ್ನು (ಪ್ರಿಯ – ಪ್ರಿಯತಮೆಯರ ವಿರಹ ನಿರೂಪಣೆ) ಸಂಕೇತಿಸುವಂತಹ ಪದವಾಗಿರುವುದರ ಜೊತೆಗೆ ಕಾವ್ಯದ ಶೀರ್ಷಿಕೆಯೂ ಆಗಿದೆ. ಈ ವೈಶಿಷ್ಟ್ಯ ಅನುವಾದದಲ್ಲಿಲ್ಲ.

## ಕಾವ್ಯದ ಸ್ವರೂಪ:

1. ಈ ಕಾವ್ಯದಲ್ಲಿ ಮೊದಲಭಾಗದಲ್ಲಿ ರಾಜೀಮತಿಯ ಸಖಿಯರು ರಾಜೀಮತಿಯ ಪರವಾಗಿ ನೇಮಿನಾಥನನ್ನು ಪ್ರಾರ್ಥಿಸುವ ಐದು ವೃತ್ತಗಳಿವೆ.

2. ಅನಂತರ ರಾಜೀಮತಿಯು ತನ್ನ ಶೃಂಗಾರ ರಸಚಾತುರ್ಯದ ನುಡಿಗಳಿಂದ ನೇಮಿನಾಥನನ್ನು ಬೇಡುವ ಮೂವತ್ತೆಂಟು ವೃತ್ತಗಳಿವೆ.

3. ರಾಜೀಮತಿಯ ಮಾತಿಗೆ ಸೋಲದೆ ನೇಮಿನಾಥನು ಧರ್ಮಬೋಧೆ ಮಾಡುವ ಐದು ವೃತ್ತಗಳಿವೆ.

ಹೀಗೆ ಈ ಲಘು ಕಾವ್ಯದಲ್ಲಿ ಒಟ್ಟು 48 ವೃತ್ತಗಳು ಮಲ್ಲಿಕಾಮಾಲಾ ಛಂದಸ್ಸಿನಲ್ಲಿವೆ.

**ಹಿನ್ನೆಲೆ ಕಥೆ:–** 'ಪ್ರಾಣಪ್ರಿಯ ಕಾವ್ಯ'ದ ಕಥಾವಸ್ತು ನೇಮಿಪುರಾಣದ ಕಥಾವಸ್ತುವಾಗಿದೆ. ಈ ಕಥಾವಸ್ತು ಮೂಲತಃ ಗುಣಭದ್ರಾಚಾರ್ಯರ ಉತ್ತರಪುರಾಣದಲ್ಲಿ ಸಿಗುತ್ತದೆ. ಅನಂತರ ಕನ್ನಡ ಜೈನ ಕವಿಗಳು ಹಲವಾರು ಮಂದಿ ತಮ್ಮದೇ ಆದರೀತಿಯಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಕಂದವೃತ್ತಗಳ ಶೈಲಿಯಲ್ಲಿ (ಕರ್ಣಪಾರ್ಯ), ಸಾಂಗತ್ಯದಲ್ಲಿ (ಮಂಗರಸ ನೇಮಿಜಿನೇಶ ಸಂಗತಿ) ಷಟ್ಪದಿಯಲ್ಲಿ (ಬ್ರಹ್ಮಣಾಂಕ) ಹೀಗೆ ಈ ಎಲ್ಲ ಕೃತಿಗಳಲ್ಲಿ ಕಂಡು ಬರುವ ಮುಖ್ಯ ಕಥಾವಸ್ತು ಹೀಗಿದೆ:

22ನೇ ತೀರ್ಥಂಕರನಾದ ನೇಮಿನಾಥನು ಹರಿವಂಶಕ್ಕೆ ಸೇರಿದವನು. ಆದ್ದರಿಂದ ನೇಮಿನಾಥನ ಪುರಾಣಕ್ಕೆ ಹರಿವಂಶ ಪುರಾಣವೆಂಬ ಹೆಸರು ಹೆಚ್ಚು ರೂಢಿಯಲ್ಲಿದೆ. ಎಲ್ಲ ತೀರ್ಥಂಕರ ಕಥೆಗಳಲ್ಲಿ ನಡೆಯುವಂತೆ ಗರ್ಭಾವತರಣ ಕಲ್ಯಾಣ, ಜನ್ಮಾಭಿಷೇಕ ಕಲ್ಯಾಣ, ಪರಿನಿಷ್ಕ್ರಮಣ ಕಲ್ಯಾಣ, ಕೇವಲ ಜ್ಞಾನೋತ್ಪತ್ತಿ ಕಲ್ಯಾಣ ಹಾಗೂ ಪರಿನಿರ್ವಾಣ ಕಲ್ಯಾಣಗಳೆಂಬ ಪಂಚಕಲ್ಯಾಣೋತ್ಸವಗಳು ನೇಮಿನಾಥನ ಜೀವನದಲ್ಲಿ ಸಂಭವಿಸಿದರೂ, 'ಪರಿನಿಷ್ಕ್ರಮಣ ಕಲ್ಯಾಣ'ದ ಸಂದರ್ಭ ಬಹಳ ವಿಶಿಷ್ಟವಾದುದು. ಈ ಪರಿನಿಷ್ಕ್ರಮಣದ ಸಂದರ್ಭದ ಕಥೆಯೇ 'ಪಾಣಪ್ರಿಯ ಕಾವ್ಯ'ದ ಕಥಾವಸ್ತುವಾಗಿದೆ.

ಹರಿವಂಶದ ರಾಜ ಸಮುದ್ರವಿಜಯ ಹಾಗೂ ಶಿವದೇವಿಯರ ಮಗ ನೇಮಿನಾಥ. ಇವನು ಶಿವದೇವಿಯ ಗರ್ಭವನ್ನು ಸೇರುವ ಸಂದರ್ಭದಲ್ಲಿ ಇಂದ್ರನ ಆಸನ ಕಂಪನವಾಯಿತು. ಆಗ ಇಂದ್ರನು ದಿವ್ಯ ದೃಷ್ಟಿಯಿಂದ ನೋಡಿ ಮುಂದೆ ಆಗ ಬೇಕಾದ ಕಾರ್ಯವನ್ನು ಮನಗಂಡು ದೇವತಾ ಸ್ತ್ರೀಯರನ್ನು ಶಿವದೇವಿಯ 'ಗರ್ಭ ಶೋಧ' ಮಾಡಲು ಕಳುಹಿಸಿದನು. ಕುಬೇರನು ಆರು ತಿಂಗಳ ಕಾಲ ರನ್ನದ ಮಳೆ ಸುರಿಸಿದನು. ದೇವತಾ ಸ್ತ್ರೀಯರು ಶಿವದೇವಿಯನ್ನು ಪೂಜಿಸಿ 'ಗರ್ಭ ಶೋಧನೆ' ಮಾಡಿ ಅವಳ ಸೇವೆಗೆ ನಿಂತರು. ನವಮಾಸಗಳು ಕಳೆದು ನೇಮೀಶನು ಉದಯಿಸಿದ ನಂತರ ದೇವೇಂದ್ರಾದಿಗಳು ಬಂದು ಶಿಶುವನ್ನು ಮೇರುಗಿರಿಗೊಯ್ದು ಹಾಲ್ಗಡಲ ನೀರೆರೆದು ಜನ್ಮಾಭಿಷೇಕ ಕಲ್ಯಾಣವನ್ನು ನೆರವೇರಿಸಿದರು.

ದಿವ್ಯ ಮೂರ್ತಿಯಾದ ನೇಮಿನಾಥನು ಯಾವ ಕೊರತೆಯೂ ಇಲ್ಲದೆ ಬೆಳೆಯುತ್ತಿದ್ದನು. ಇವನು ಕೃಷ್ಣ - ಬಲರಾಮರಿಗಿಂತ ಬಲಶಾಲಿ ಎಂಬುದು ಹಲವು ಸಂದರ್ಭಗಳಲ್ಲಿ ತಿಳಿದು ಬರುತ್ತದೆ.

ಹೀಗೆ ಕೆಲವು ಕಾಲವು ಕಳೆಯಲು ವಸಂತ ಮಾಸವು ಪ್ರಾಪ್ತವಾಗುತ್ತದೆ. ಆಗ ಶ್ರೀಕೃಷ್ಣನು ತನ್ನ ಹಾಗೂ ಬಲರಾಮನ ಪರಿವಾರದೊಂದಿಗೆ ನೇಮೀಶ್ವರನೊಡನೆ ಜಲಕೇಳಿ-ವನಕೇಳಿಗಾಗಿ ಉದ್ಯಾನಕ್ಕೆ ಹೋಗುತ್ತಾನೆ. ಜಲಕೇಳಿಯ ನಂತರ ನೇಮಿನಾಥನು ತನ್ನ ಒದ್ದೆ ಬಟ್ಟೆಯನ್ನು ಸತ್ಯಭಾಮೆಗೆ ನೀಡಲು ಕುಪಿತಳಾದ ಸತ್ಯಭಾಮೆಯು "ತನ್ನ ಗಂಡ ಬಾಲ್ಯದಲ್ಲಿಯೇ ರಕ್ಕಸಿಯರನ್ನು ಕೊಂದು, ಉರಗ ಶಯ್ಯೆಯನ್ನು ಏರಿ, ಶಾರ್ಙ್ಗಧನ್ವವನ್ನು ಏರಿಸಿ ಪಾಂಚಜನ್ಯವನ್ನು ಊದಿದಂತಹ ಪರಾಕ್ರಮಿ. ಅಂತಹವನ ಹೆಂಡತಿಯಾದ ನನಗೆ ಊಳಿಗವನ್ನು ಹೇಳಬಹುದೇ? ಎನ್ನುತ್ತಾಳೆ.

ಈ ಮಾತಿನಿಂದ ಕುಪಿತನಾದ ನೇಮಿಯು ಪಟ್ಟಣಕ್ಕೆ ಹಿಂತಿರುಗಿ ಸತ್ಯಭಾಮೆಯು ಹೇಳಿದ ಎಲ್ಲ ಕಾರ್ಯಗಳನ್ನೂ (ಉರಗ ಶಯ್ಯೆಯನ್ನು ಏರಿ, ಶಾರ್ಙ್ಗಧನ್ವವನ್ನು ಏರಿಸಿ ಪಾಂಚಜನ್ಯವನ್ನು ಊದಿ) ಮಾಡಿ ಮುಗಿಸುತ್ತಾನೆ. ಆಗ ಇವನ ಪರಾಕ್ರಮವನ್ನು ಅರಿತ ಶ್ರೀಕೃಷ್ಣನು ಮುಂದೆ ಇವನು ತನ್ನ ರಾಜ್ಯವನ್ನು ವಶಪಡಿಸಿಕೊಂಡರೂ ಹೆಚ್ಚೇನಲ್ಲ ಎಂದುಕೊಂಡು ಇವನಲ್ಲಿ ವೈರಾಗ್ಯ ಉದಯವಾಗುವಂತಹ ಒಂದು ಸನ್ನಿವೇಶವನ್ನು ಸೃಷ್ಟಿಸಲು ಯೋಚಿಸುತ್ತಾನೆ. ಅದರಂತೆ, ಅವನು ನೇಮಿನಾಥನಿಗೆ ಮದುವೆ ಮಾಡಲು ನಿಶ್ಚಯಿಸುತ್ತಾನೆ.

ಕೃಷ್ಣನು ಸಮುದ್ರ ವಿಜಯನ ಬಳಿಗೆ ಹೋಗಿ ನೇಮಿನಾಥನಿಗೆ ವಿವಾಹಯೋಗ್ಯವಾದ ವಯಸ್ಸು ಬಂದಿದೆ. ನೇಮಿನಾಥನಿಗೆ ವಿವಾಹವನ್ನು ಏರ್ಪಡಿಸಬೇಕೆಂದು ಹೇಳಲು ಸಮುದ್ರವಿಜಯನು ತನ್ನ ಒಪ್ಪಿಗೆಯನ್ನು ನೀಡುತ್ತಾನೆ.

ಆಗ ಶ್ರೀಕೃಷ್ಣನು ಉಗ್ರ ಕುಲದ ಜುನಾಗಢದ ಉಗ್ರಸೇನ ಮಹಾರಾಜನ ಮಗಳಾದ ರಾಜೀಮತೀ ಹಾಗೂ ಐದುನೂರು ರಾಜಕುಮಾರಿಯರೊಡನೆ ವಿವಾಹವನ್ನು ಏರ್ಪಡಿಸುತ್ತಾನೆ. ಅತ್ಯಂತ ಸುಂದರಿಯರಾದ ರಾಜಕುಮಾರಿಯರನ್ನು ವರಿಸಲು ನೇಮಿನಾಥನು ದಿಬ್ಬಣದೊಂದಿಗೆ ಹೊರಡುತ್ತಾನೆ. ಕಲ್ಯಾಣ ಮಂಟಪದ ಬಳಿಗೆ ಬರುವ ದಾರಿಯಲ್ಲಿ ನೇಮಿನಾಥನಿಗೆ ಕಾಣುವಂತೆ ಹಸಿವು ಬಾಯಾರಿಕೆಗಳಿಂದ ಗೋಳಿಡುತ್ತಿರುವ ಕೆಲವು ಮೃಗಗಳನ್ನು ಒಂದು ತಟ್ಟಿಯಲ್ಲಿ ಕಟ್ಟಿರುತ್ತಾರೆ. ಇದನ್ನು ನೋಡಿದ ನೇಮಿನಾಥನು ಈ ಪ್ರಾಣಿಗಳನ್ನು ಅಲ್ಲಿ ಏಕೆ ಕಟ್ಟಿರುವಿರಿ

ಎಂದು ಕೇಳಲು 'ನಿಮ್ಮ ವಿವಾಹದ ಭೋಜನಕ್ಕೆಂದು ನಾವು ಈ ಪ್ರಾಣಿಗಳನ್ನು ಇಲ್ಲಿ ಕೂಡಿ ಹಾಕಿದ್ದೇವೆಂದು ಕೃಷ್ಣನು ಮೊದಲೇ ಹೇಳಿಕೊಟ್ಟಿದ್ದಂತೆ ಚಾರರು ಹೇಳುತ್ತಾರೆ. ಇದನ್ನು ಕೇಳಿದ ನೇಮಿನಾಥನು ವೈರಾಗ್ಯಪರನಾಗುತ್ತಾನೆ. ಕನ್ನೆಯರೊಡನೆ ಮದುವೆ ಆಗುವುದು "ಪ್ರಥಮ ಚುಂಬನದಲ್ಲಿ ಹಲ್ಲು ಮುರಿದಂತೆ" ಎಂದು ಚಿಂತಿಸಿ ಮೋಕ್ಷಲಕ್ಷ್ಮಿಯೊಡನೆ ಮದುವೆಯಾಗಲು ನಿಶ್ಚಯಿಸುತ್ತಾನೆ.

ಇದರಿಂದ ದುಃಖಿತರಾದ ತಂದೆ ತಾಯಿಯರನ್ನು ಸಮಾಧಾನಪಡಿಸಿ ಅವರಿಗೆ ಸಾಂಸಾರಿಕ ಜೀವನದ ನಶ್ವರತೆಯ ಬಗೆಗೆ ಹೇಳುತ್ತಾನೆ. ದೇವತೆಗಳು ಬಂದು ಪರಿನಿಷ್ಕ್ರಮಣ ಕಲ್ಯಾಣವನ್ನು ನೆರವೇರಿಸುತ್ತಾರೆ. ಮದ್ಣುವೆಗೆ ಸಿದ್ಧರಾಗಿದ್ದ ರಾಜೀಮತಿ ಮೊದಲಾದ ಕನ್ಯೆಯರೂ ಸಹ ಆರ್ಜಿಕೆಯಾಗುತ್ತಾರೆ.

## ಏ. ಅನುವಾದಿತ ಪ್ರಾಣಪ್ರಿಯ ಕಾವ್ಯದ ಕಥಾವಸ್ತು

ನೇಮಿನಾಥನ ಪರಿನಿಷ್ಕ್ರಮಣದ ನಿರ್ಧಾರದ ನಂತರದ ವಿಷಯವೇ 'ಪ್ರಾಣಪ್ರಿಯ ಕಾವ್ಯ'ದ ಕಥಾವಸ್ತು. ನೇಮಿನಾಥನು ತಪಸ್ಸಿಗೆ ಹೊರಟುನಿಂತ ವಿಷಯವನ್ನು ತಿಳಿದ ರಾಜೀಮತಿಯು ಅವನನ್ನು ಮತ್ತೆ ಸಂಸಾರಕ್ಕೆಳೆಸಲು ಮಾಡುವ ಪ್ರಯತ್ನವೇ ಈ ಕಾವ್ಯದ ಕಥಾವಸ್ತು.

**ಪೂರ್ವ ಕಥಾವಸ್ತು:**

ನೇಮಿಕುಮಾರನು ಪರಿನಿಷ್ಕ್ರಮಣ ಕಲ್ಯಾಣವನ್ನು ಹೊಂದಿದ ಸುದ್ದಿಯನ್ನು ತಿಳಿದ ಉಗ್ರಸೇನನ ಮಗಳಾದ ರಾಜೀಮತಿಯೂ ರಾಜಕುಮಾರನಲ್ಲಿಗೆ ಹೋಗಿ ತನ್ನ ವಿಯೋಗದ ದುಃಖವನ್ನು ದೂರ ಮಾಡುವಂತೆ ದೈನ್ಯದಿಂದ ಬೇಡುತ್ತಾ ನಿಲ್ಲುತ್ತಾಳೆ. ಆಗ ಅವಳ ಸಖಿಯರು ಅವಳನ್ನು ಸಮಾಧಾನ ಪಡಿಸುತ್ತಾ ನೇಮಿನಾಥನನ್ನು ಕುರಿತು, ಈ ಮದನಾಂಗಿಯನ್ನು ನೋಡು, ಇಂತಹ ರೂಪವತಿಯನ್ನು ದೂರಮಾಡಿ ಯೌವನದ ಕಾಲದಲ್ಲಿ ವೃದ್ಧರಿಗೆ ಅರ್ಹವಾದ ತಪಸ್ಸನ್ನು ಅಪೇಕ್ಷಿಸುವಂತಹ ಕಾಮಹೀನರು ಈ ಲೋಕದಲ್ಲಿದ್ದಾರೆಯೇ? ಕರುಣೆತೋರಿ ಜಿಂಕೆಕಣ್ಣಿಳ ಈ ಸುಂದರಿಯನ್ನು ವರಿಸು. ಏಕೆಂದರೆ ನವಯೌವನದ ಕಾಲದಲ್ಲಿ ವಿಯೋಗ ಸಮುದ್ರವನ್ನು ಯಾರೂ ಒಂಟಿಯಾಗಿ ಈಜಲು ಸಾಧ್ಯವಿಲ್ಲ. ನಿನ್ನ ನಿರ್ಧಾರವನ್ನು ಬದಲಿಸದಿದ್ದರೆ ತನ್ನ ಮಗಳನ್ನು ರಕ್ಷಿಸಿಕೊಳ್ಳಲು ಉಗ್ರಸೇನ ಮಹೀಪತಿಯೇ ಬರುವನು. **"ತಮ್ಮ ಕನ್ಯೆಯ ರಕ್ಷಣೋದ್ಯಮಗೈವುದುಂ ಸಹಜಂ ವಲಂ"** (1 – 5) ಎಂದು ಬೆದರಿಕೆಯನ್ನೂ

ಹಾಕುತ್ತಾರೆ. ಅವರ ಮಾತಿಗೆ ರಾಜಕುಮಾರನು ಚಲಿಸದಿರಲು ರಾಜೀಮತಿಯೇ ಮಾತಿಗೆ ತೊಡಗುತ್ತಾಳೆ.

ಲೋಕದಲ್ಲಿ ಸುಂದರನೂ, ರತಿಕೇಳಿಕೌಶಲವಲ್ಲಭನೂ ಆದವನು ಸತೀ ಭೂಷಣನೆಂದು ರಸಜ್ಞರು ಹೇಳುತ್ತಾರೆ. ವಲ್ಲಭೋತ್ತಮನೇ, ಸರೋವರದಲ್ಲಿನ ತಾವರೆಗಳು ಸೂರ್ಯೋದಯವಾದೊಡನೆ ಸಹಜವಾಗಿ ಅರಳುವುವು. ಹಾಗೆಯೇ ನೋಡುಗರಿಗೆ ನಿನ್ನ ಕಣ್ಣುಗಳ ಸುಧಾಜಲದಂತಹ ರೂಪವನ್ನು ತೋರಿದರೆ ಸೂರ್ಯನನ್ನು ಕಂಡ ಕಮಲಗಳಷ್ಟೇ ಸಹಜವಾಗಿ ಆಕರ್ಷಿತರಾಗುತ್ತಾರೆ. ಹಾಗೆಯೇ ನಾನೂ ನಿನ್ನಲ್ಲಿ ಆಕರ್ಷಿತಳಾಗಿದ್ದೇನೆ.

ಸತ್ಕುಲಪ್ರಸೂತಳೂ, ಸುಂದರಿಯೂ, ಸದ್ಗುಣಿಯೂ ಆದ ನನ್ನನ್ನು ಹೊಂದಿದ ಮಾನವನು ಲೋಕದಲ್ಲಿ ಖಂಡಿತವಾಗಿಯೂ ಸೌಖ್ಯದಿಂದ ಬಾಳುತ್ತಾನೆ. ಆದರೆ ನನ್ನಂತಹ ಸುಂದರಿಯನ್ನು ದೂರಮಾಡಿ ತಪೋನಿರತನಾಗುವೆಯೆನ್ನುವ ನಿನ್ನನ್ನು ನೋಡಿದರೆ **"ಸಾರಿಭಾಗ್ಯವೆ ಹೊಂದಿಬಂದ ಸುಧಾರಸಂಗಳ ದೂರಿಸೀ ಭೂರಿ ಸಾಗರದುಪ್ಪುನೀರನಪೇಕ್ಷಿಪರ್ ದಿಟಮರ್ಪರೇ"** ಎಂದು ಆಶ್ಚರ್ಯವಾಗುತ್ತದೆ ಎನ್ನುತ್ತಾಳೆ.

ನಿನ್ನ ಕಣ್ಣೊಳು ಜಿಂಕೆಕಣ್ಗಳ ಸೌಂದರ್ಯವನ್ನೂ, ಚಂದ್ರನಂತಹ ಮುಖ ಪದ್ಮವನ್ನೂ, ರವಿಯ ತೇಜಸ್ಸಿನಂತಹ ಔನ್ನತ್ಯವನ್ನೂ, ಆನೆಯಂತಹ ಗಂಭೀರವಾದ ನಡಿಗೆಯನ್ನೂ ಹೊಂದಿರುವ ನಿನ್ನ ರೂಪವನ್ನು ಹೋಲಿಸಲು ಬೇರೆ ಯಾವುದೇ ವಸ್ತುಗಳಿಲ್ಲ. (6–13)

ನನ್ನೊಡನೆ ವಿವಾಹವನ್ನು ಬಯಸಿ ಬಂದ ನೀನು ಈಗ ಮುಕ್ತಿಕಾಂತೆಯನ್ನು ಪಡೆಯಲು ಬಯಸುತ್ತಿದ್ದೀಯೆ. ಪ್ರಬುದ್ಧನಾದ ನಿನ್ನ ಮನವೂ ಸಹ ಚಾಂಚಲ್ಯಕ್ಕೆ ಒಳಗಾಯಿತೇ?! **"ಕಾವ ಮಂದರಕೂಟ ತಾಂ ಚಲಿಸಿರ್ಪುದೇಂಗಡ ಲೋಕದೇ"** ಎಂದು ರಾಜೀಮತಿಯು ಆಶ್ಚರ್ಯಪಡುತ್ತಾಳೆ (15)

ಮತ್ತೆ, ಮಹಾಮಹಿಮನಾದ ನೀನು ನಿನ್ನ ಪ್ರಭಾವವನ್ನು ಬೀರಿ ನನ್ನ ವಿಯೋಗವೆಂಬ ಕತ್ತಲನ್ನು ಕಳೆದು ನನ್ನ ಹೃತ್ಕಮಲವು ಪ್ರಕಾಶಿಸುವಂತೆ ಏಕೆ ಮಾಡಲಿಲ್ಲ!!

ಚಂದ್ರನು ತನ್ನ ತಂಪಾದ ಬೆಳದಿಂಗಳನ್ನು ಪಸರಿಸಿದರೂ ಅದು ವಿರಹಾಗ್ನಿ ಹೆಚ್ಚುವಂತೆ ಮಾಡುತ್ತದೆ. ಆದರೆ ಚಂದ್ರನಂತಹ ನಿನ್ನನ್ನು ನೋಡಲು ತಾಪವು ಕಡಿಮೆಯಾಗಿ ಸಂತೋಷವುಂಟಾಗುತ್ತದೆ.

ಹೀಗೆ ಬೇಡುತ್ತಿರುವ ನನ್ನ ವಿಯೋಗದ ದುಃಖವನ್ನು ನೀನು ದೂರಮಾಡಿದರೆ ನಿನ್ನನ್ನು ವಶಪಡಿಸಿಕೊಳ್ಳುವ ಬೇರೆ ವಶೀಕರಣತಂತ್ರಗಳೇ ಬೇಕಿಲ್ಲ. ಕಾಡಿನ ಕಿಚ್ಚನ್ನು ಘಟಗಳ ನೀರಿನಿಂದಲೇ ಪರಿಹರಿಸಬಹುದಾದರೆ (ಪರಿಹರಿಸಲು ಸಾಧ್ಯವಾದರೆ) ಆಗಸದ ಮೋಡಗಳೇಕೆ ಬೇಕು?!

ಆದ್ದರಿಂದ ಉನ್ನತ ನಡೆಯ ನಿನ್ನನ್ನು ಒಂದು ಬಾರಿ ನೋಡಿದ ಯಾವ ಸ್ತ್ರೀಯರೂ ಅನ್ಯರನ್ನು ಕೂಡ ಬಯಸುವುದಿಲ್ಲ. ಏಕೆಂದರೆ ವಜ್ರವನ್ನು ಬಯಸುವ ಯಾವ ಮನುಷ್ಯನೂ ಗಾಜಿನ ಚೂರಿನಿಂದ ತೃಪ್ತನಾಗಲಾರ (20).

ನನ್ನ ಸಂಗಡ ಬೇಗ ಊರಿಗೆ ಬಂದು ರಾಜ್ಯವನ್ನು ಪಡೆದು ಭೂರಿ ಭೋಗಗಳನ್ನು ಅನುಭವಿಸುತ್ತಾ ಯೌವನವನ್ನು ಸಾರ್ಥಕಮಾಡು. ಊರಿನಲ್ಲಿ ಇದ್ದುಕೊಂಡೇ ಧರ್ಮ ಕಾರ್ಯಗಳಲ್ಲಿ ತೊಡಗಿಕೊಂಡು ಮೋಕ್ಷದ ದಾರಿಯನ್ನು ಕಾಣುವುದೂ ಉತ್ತಮವಾದ ಪ್ರಯತ್ನವೇ ಅಲ್ಲವೇ?! (23).

ನಾರಿಯೇ ಪುರುಷನ ಸೌಖ್ಯಕ್ಕೆ ಕಾರಣ ಎಂದು ಜ್ಞಾನಿಗಳು ಸಾರಿದ್ದಾರೆ. ನನ್ನ ರೂಪವನ್ನು ನೋಡಿಯೂ ಮೂರ್ಖನಂತೆ ನನ್ನನ್ನು ದೂರಮಾಡಬೇಡ. ಜನರು ನಿನ್ನನ್ನು ಜ್ಞಾನಿಯೆಂದು ಹೊಗಳುತ್ತಿದ್ದಾರೆ. ಅಂತೆಯೇ ನಡೆದುಕೋ. (24).

ಪ್ರಾಜ್ಞನೂ ನೀತಿವಂತನೂ ಸದ್ಗುಣಿಯೂ ಜಗತ್ತಿನ ಎಲ್ಲ ಜಂತುವರ್ಗಕ್ಕೂ ಸೌಖ್ಯವನ್ನು ಬಯಸುವನಾದ ನೀನು, ನನ್ನ ಅಪೇಕ್ಷೆಯನ್ನು ಸಲ್ಲಿಸಿ ಲೋಕದಲ್ಲಿ ಭವ್ಯದಾನಿಯಾಗು. (25)

ಸಾಗರವನ್ನೆಲ್ಲ ಹೀರಿದ ಅಗಸ್ತ್ಯನೂ ಸಹ ನನ್ನ ವಿಯೋಗದ ಆಗರವಾದ ಸಮುದ್ರವನ್ನು ಹೀರಲು ಅಶಕ್ತನಾದ. ಭೋಗಸಾಗರದಲ್ಲಿ ಮಗ್ನಳಾಗಿರುವ ನಾನು ನಿನ್ನನ್ನು ಆಶ್ರಯಿಸಿರುವೆ. ಬೇಗನೆ ನನ್ನ ದುಃಖವಾರಿಧಿಯನ್ನು ಹಿಂಗಿಸು (26).

ಮದುವೆಯ ಸಮಯದಲ್ಲಿಯೂ ನಿನ್ನ ಮುಖವನ್ನು ಹೆಚ್ಚು ಹೊತ್ತು ನೋಡಲಾಗಲಿಲ್ಲ. ನಿನ್ನ ಮುಖವು ಮೋಡದಿಂದ ಸೂರ್ಯಬಿಂಬವು ಮರೆಯಾಗುವಂತೆ ಮಾಯವಾಯಿತು.

ಚಿನ್ನವಣ್ಣದ ನನ್ನಲ್ಲಿ ನೀಲವರ್ಣದವನಾದ ನೀನು ಸೇರಿದರೆ ಆ ತನು ಸಂಗಮವು ಉನ್ನತವಾದ ಹೇಮವರ್ಣದ ಮೇರು ಪರ್ವತವನ್ನು ಸೇರಿದ ನೀಲಮೇಘದಂತೆ ತೋರುವುದು. ಕೋಮಲವಾದ ಹರಿಣಿಯಂತೆ ಕಂಪಿಸುತ್ತಿರುವ ನನ್ನ ಮೇಲೆ ಕಾಮನೆಂಬ ಬೇಡನು ಬಾಣಗಳನ್ನು ಬಿಡುತ್ತಿದ್ದಾನೆ. ಎಲ್ಲ ಜೀವ ಜಂತುಗಳಲ್ಲಿಯೂ ದಯೆಯನ್ನು ಹೊಂದಿರುವ ನಿನಗೆ ನನ್ನ ಮೇಲೇಕೆ ನಿರ್ದಯೆ? ದೇವತೆಗಳು ನಿನ್ನನ್ನು ಜ್ಞಾನಿಯೆಂದು ಹೊಗಳುತ್ತಿದ್ದಾರೆ. ನೀನು ನನ್ನ ಮೇಲೆ ದಯೆತೋರಿ ರಕ್ಷಿಸು.

ಮಾರಸರ್ಪವು ಕಚ್ಚಿದ ವಿಷದ ಗಾಯವು ನನ್ನನ್ನು ಬಾಧಿಸುತ್ತಿದೆ. ನೀನು ನನ್ನ ಬಳಸಾರಿ ತನುಸಂಗವೆಂಬ ಔಷಧಿಯನ್ನು ನೀಡಿ ನನ್ನ ನೋವನ್ನು ನಿವಾರಿಸು. ಇಲ್ಲವಾದರೆ ನಿಶ್ಚಯವಾಗಿಯೂ ನಾನು ಸತ್ತು ಹೋಗುತ್ತೇನೆ.

ನನ್ನ ಹಣೆಯಲ್ಲಿ ಬ್ರಹ್ಮನು ಬರೆದ ಬರಹವನ್ನು ನಿನ್ನ ಬಿಟ್ಟರೆ ಲೋಕದಲ್ಲಿ ಯಾರೂ ಬದಲಿಸಲಾರರು. ಸನ್ನುತಾಂಗನೆ ನನ್ನ ಚಿಂತೆಯನ್ನು ದೂರಮಾಡಿ ನನ್ನ ದುರವಸ್ಥೆಯನ್ನು ಪರಿಹರಿಸಲು ನೀನೊಬ್ಬನೇ ಸಮರ್ಥನು. (28. 30. 35).

ಯದುಕುಲ ಶ್ರೇಷ್ಠನೇ. ನಿನ್ನಲ್ಲಿ ಎಂತಹ ಭೂರಿ ವೈಭವಗಳಿದ್ದರೂ. ಸಾಮಂತ ರಾಜರುಗಳಿದ್ದರೂ ನಾನಿಲ್ಲದ ನಿನ್ನ ವೈಭವವು ರಾತ್ರಿಯಲ್ಲಿ ಸಹಸ್ರಾರು ನಕ್ಷತ್ರಗಳು ಹೊಳೆಯುತ್ತಿದ್ದರೂ ಚಂದ್ರನ ಬೆಳಕಿಗೆ ಹೇಗೆ ಸಮಾನವಾಗಲಾರವೋ ಹಾಗೆ ಪೂರ್ಣವಾಗಲಾರದು.

ನಿನ್ನ ಪಾದ ಪದ್ಮಗಳನ್ನು ಆಶ್ರಯಿಸಿದವರ ಶತ್ರುಗಳೂ ಸಹ ನಿನ್ನ ಭಕ್ತರಿಗೆ ತೊಂದರೆಯನ್ನುಂಟು ಮಾಡುವುದಿಲ್ಲ. ನಾಥನೇ. ನಾನು ನಿನ್ನನ್ನೇ ಪತಿಯೆಂದು ನಂಬಿರುವೆ. ನೀನು ನನ್ನನ್ನು ಸೇರದಿದ್ದರೆ ನಾನು ನಿನ್ನಲ್ಲೇ ಶರಣು ಹೊಂದುವೆನು.

ತನ್ನ ಪತ್ನಿಯನ್ನು ಪರರು ಪೀಡಿಸಲು ಯತ್ನಿಸಿದರೆ ಅಶಕ್ತನೂ ಸಹ ಪರರಿಂದ ರಕ್ಷಿಸಲು ಪ್ರಯತ್ನಿಸುತ್ತಾನೆ. ಶಕ್ತನಾದ ಯದುವಂಶದ ನಿಜೇಶನೇ. ನನ್ನನ್ನು ದಹಿಸುತ್ತಿರುವ ಶೋಕಾಗ್ನಿಯನ್ನು '**ನಿನ್ನ ನಾಮ ಕೀರ್ತನವಾರಿಯಿಂ**' ಪರಿಹರಿಸು.

ನಿನ್ನ ನಾಮ ಸ್ಮರಣೆಯಿಂದ ನಿನ್ನನ್ನು ಬೇಡುವವರ ಹೃದಯಗಳಲ್ಲಿ ವಿಷವೂ ದೂರವಾಗುತ್ತದೆ. ಕಾಮಸರ್ಪದ ಭಯದಿಂದ ನಿನ್ನ ನಾಮ ಸ್ಮರಣೆ ಮಾಡುತ್ತಲಿದ್ದರೂ ನಾನು ಏಕೆ ಹತಶಕ್ತಳಾಗಿದ್ದೇನೆ?

ನಿನ್ನ ಕೀರ್ತನದಿಂದ ಹೃದಯ ಕಮಲವು ಅರಳುವುದು. ದೇಹದ ಕಲ್ಮಶವು ನೀಗುವುದು. ಮನಸ್ಸು ಬಯಸಿದ್ದೆಲ್ಲಾ ಕಲ್ಪವೃಕ್ಷದಂತೆ ಒದಗಿಬರುವುದು. ಎಲ್ಲ ಕಷ್ಟಗಳೂ ದೂರವಾಗುವುದು. ವಿರಹಾಗ್ನಿಯೂ ಕೂಡ ಸೂರ್ಯ ಬಂದೊಡನೆ ಕತ್ತಲು ನಾಶವಾಗುವಂತೆ ನಾಶವಾಗುವುದು.

ನಿನ್ನ ಪಾದ [ಪಯೋಜದಾ ವನದಾಶ್ರಿತರ್] ಪದ್ಮವನ್ನು ಆಶ್ರಯಿಸಿದವರಿಗೆ ಶುಭ ಮಂಗಳಗಳು ಉಂಟಾಗುತ್ತವೆ. ಉನ್ನತವಾದ ಅಧಿಕಾರಗಳು ಲಭಿಸುತ್ತವೆ. ಸಿರಿವಂತರಾದ ಪುತ್ರರೂ, ದಾನಮಾಡುವ ಅವಕಾಶಗಳೂ, ಎಲ್ಲ ಯಶಸ್ಸುಗಳೂ ಲಭಿಸುವುದು ಖಂಡಿತ ಎಂದು ಹೇಳುತ್ತಾಳೆ ರಾಜೀಮತಿ (38-42).

ಆಗ ಕಾಮ ವಿಕ್ಲವೆಯಾದ ರಾಜೀಮತಿಯನ್ನು ಕುರಿತು ನೇಮಿನಾಥನು ಹೀಗೆ ಹೇಳುತ್ತಾನೆ: ಮೋಹವನ್ನು ಬಿಟ್ಟು ಧರ್ಮವನ್ನು ತಿಳಿಯುವ ಪ್ರಯತ್ನವನ್ನು ಮಾಡು. ಪ್ರೇಮದಿಂದ ಸದಾ ಧರ್ಮದಲ್ಲಿ – ಧರ್ಮಮಾರ್ಗದಲ್ಲಿ – ನಿರತರಾಗಿರುವ ಎಲ್ಲ ಜೀವಿಗಳೂ ಮೋಕ್ಷವನ್ನು ಶಾಶ್ವತವಾಗಿ ಹೊಂದುವರು.

ಧರ್ಮಕ್ಕೆ ಶರಣಾದವರಿಗೆ ಶುದ್ಧಜ್ಞಾನವು ಉಂಟಾಗುವುದು. ಶರೀರವು ಹಂಸ ಕಾಂತಿಯನ್ನು ಹೊಂದುವುದು. ದೇಹವು ಮನ್ಮಥನ ರೂಪವನ್ನು ಪಡೆಯುವುದು. ದೇವೇಂದ್ರ ವೈಭವಕ್ಕೆ ಸಮವಾದ ಐಶ್ವರ್ಯವನ್ನು ಪಡೆಯುವರು "ಆದ ಕಾರಣ ಧರ್ಮಮಂ ಪರಿಪಾಲಿಸೌ".

ಈಗ ದೇವಲೋಕದಲ್ಲಿ ಘನಸೌಧ ಮೊದಲಾದ ವೈಭವಗಳನ್ನು ಹೊಂದಿರುವ ದೇವತೆಗಳೂ ಸಹ ಧರ್ಮವನ್ನು ಆಶ್ರಯಿಸಿಯೇ ಅವುಗಳನ್ನು ಪಡೆದಿರುವುದು. ಆದ್ದರಿಂದ ಭೋಗ ವರ್ಜಿಸಿ ದೃಢಚಿತ್ತದಿಂದ ಮಂಗಳಾತ್ಮಕವೂ ಸುಸ್ಥಿರವೂ ಆದ ಮುಕ್ತಿಯನ್ನು ಬೇಗನೆ ಹೊಂದಲು ಯತ್ನಿಸು.

ಬಂಧುಮಿತ್ರರು ಬಂಧನವೆಂದೂ, ವಿಷಯಾಶೆಯನ್ನು ದುರ್ವಿಷವೆಂದೂ 'ಅರ್ಥವನ್ನು' ಅನರ್ಥಕ್ಕೆ ಕಾರಣವೆಂದೂ ತಿಳಿ. ಇಂದಿನಿಂದ ಇವುಗಳನ್ನೆಲ್ಲ ತೊರೆದು - ಭೋಗ ಜೀವನವನ್ನು ತೊರೆದು - ಸದ್ಧರ್ಮವನ್ನು ಸೇವಿಸು. ಇದರಿಂದ ಪುರುಷೋತ್ತಮನಿಂದಲೂ ಪೂಜಿಸಲ್ಪಡುತ್ತೀಯೆ ಎಂದು ನೇಮಿನಾಥನು ರಾಜೀಮತಿಗೆ ಧರ್ಮ (ಬುದ್ಧಿಯನ್ನು) ವನ್ನು ಬೋಧಿಸುತ್ತಾನೆ.

ನೇಮಿನಾಥನ ಉಪದೇಶವನ್ನು ಆಲಿಸಿದ ರಾಜೀಮತಿಯು ಎಲ್ಲ ವೈಭವಗಳನ್ನೂ ತ್ಯಜಿಸಿ ಮೋಕ್ಷಧಾಮವನ್ನು ಸೇರುತ್ತಾಳೆ. ನಂತರ ನೇಮಿನಾಥನು ಧ್ಯಾನವನ್ನಾಚರಿಸಿ ಮಹೋನ್ನತವಾದ ಮುಕ್ತಿಯನ್ನು ಹೊಂದಿ ಲೋಕವಂದಿತನಾಗುತ್ತಾನೆ. (44-49).

## ಮಲ್ಲಿಕಾಮಾಲಾವೃತ್ತ ಛಂದಸ್ಸು

"ಚಂಪೂಕೃತಿಗಳಲ್ಲಿ ಸಾಮಾನ್ಯವಾಗಿ ಖ್ಯಾತ ಕರ್ನಾಟಕಗಳೆಂದು ಪ್ರಸಿದ್ಧವಾದ ಆರು ವೃತ್ತಗಳು (ಮತ್ತೇಭ ವಿಕ್ರೀಡಿತ, ಶಾರ್ದೂಲ ವಿಕ್ರೀಡಿತ, ಸ್ರಗ್ಧರಾ, ಮಹಾಸ್ರಗ್ಧರಾ, ಉತ್ಪಲಮಾಲಾ, ಚಂಪಕಮಾಲಾ) ಕಂಡುಬರುತ್ತವೆ. ಚಂಪೂಕಾವ್ಯಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗುವ ಇತರ ವೃತ್ತಗಳಲ್ಲಿ ಪ್ರಮುಖವಾದ ವೃತ್ತಗಳೆಂದರೆ ಮಲ್ಲಿಕಾ ಮಾಲೆ, ತಾಳ, ಮಾಲಿನಿ, ಶಿಖರಿಣಿ, ಹರಿಣಿ, ಪೃಥ್ವಿ ಮೊದಲಾದವು. ಇವುಗಳಲ್ಲಿ ಮಲ್ಲಿಕಾಮಾಲಾ ವೃತ್ತ ಬಹಳ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗಿದೆ. ಉದಾಹರಣೆಗೆ ಪಂಪಭಾರತದಲ್ಲಿ 8 ವೃತ್ತಗಳು, ಶಾಂತಿಪುರಾಣದಲ್ಲಿ ಮೂರು ವೃತ್ತಗಳು ಕಂಡುಬರುತ್ತವೆ. ಇದು ವರ್ಣಗಣ ವೃತ್ತವೆಂದು ಗಣ್ಯವಾಗಿದ್ದರೂ ಮಾತ್ರಾಗಣದಲ್ಲಿಯೂ ವಿಶ್ಲೇಷಿಸಬಹುದು. ನಾಗವರ್ಮ "ಧೃತಿ" ಎಂಬ ಛಂದಸ್ಸಿನಲ್ಲಿ 18 ಅಕ್ಷರಗಳ ಪಾದವಾಗಿ ಹುಟ್ಟುವ ವೃತ್ತಗಳಲ್ಲಿ ಮಲ್ಲಿಕಾಮಾಲೆ ಒಂದು ವೃತ್ತ ಎನ್ನುತ್ತಾನೆ. 'ಮಲ್ಲಿಕಾಮಾಲೆ' ಎಂಬ ಹೆಸರಿನ ವೃತ್ತ ಸಂಸ್ಕೃತದಲ್ಲಿಲ್ಲ. ಆದರೆ 'ಹರಿನರ್ತನಂ' ಎಂಬ ಹೆಸರಿನ ಇದೇ ಲಯದ ವೃತ್ತ ಸಂಸ್ಕೃತದಲ್ಲಿದೆ. ಇದರ ಲಯವು ತಾಳಗಣನೆಗೆ ಒಡಂಬಡುತ್ತದೆ" [17]

# ಅಧ್ಯಾಯ 3 – ಅಡಿ ಟಿಪ್ಪಣಿಗಳು

(1) ಕಾಳಿದಾಸನ ಸಮಕಾಲೀನರೂ ಹೌದು. ಭಕ್ತಾಮರಾದಿ ಪಂಚಸ್ತೋತ್ರ ಭಾವಪ್ರಕಾಶಿಕಾ, ಪಂಡಿತ ರತ್ನ ಎ.ಶಾಂತಿರಾಜ ಶಾಸ್ತ್ರಿ ಟ್ರಸ್ಟ್ – ಬೆಂಗಳೂರು. ಪುಟ–7

(2) ಸಂಸ್ಕೃತ ಸಾಹಿತ್ಯದ ಇತಿಹಾಸ, ಆಚಾರ್ಯ ಬಲದೇವ ಉಪಾಧ್ಯಾಯ, ಅನುವಾದ–ಎಸ್.ರಾಮಚಂದ್ರಶಾಸ್ತ್ರಿ 2003 – ಪುಟ–561.

(3) ಪ್ರೊ.ಜಿ.ಅಶ್ವತ್ಥನಾರಾಯಣರವರ ಕನ್ನಡ ಸಾಹಿತ್ಯ ಕಣ್ಮಣಿಗಳು ಮಾಲಿಕೆಯ ಎಫ್.ಎಮ್.ರೇಡಿಯೋ ಭಾಷಣ ಮತ್ತು ಅಪ್ರಕಟಿತ ಲೇಖನ.

(4) ಕನ್ನಡ ಚಿತ್ರ ಕಾವ್ಯ – ಡಾ. ಟಿ.ವಿ.ವೆಂಕಟಾಚಲ ಶಾಸ್ತ್ರಿ – ಪುಟ 4.

(5) ಕನ್ನಡ ನಿಘಂಟು – ಸಂಪುಟ 1 – 1978.

(6) ಕಾವ್ಯಾರ್ಥ ಪದ ಕೋಶ – ಲೇ.: ಶ್ರೀ ಜಿ.ಎಸ್.ಶಿವರುದ್ರಪ್ಪ ಹಾಗೂ ಶ್ರೀ ಕೆ.ವಿ.ನಾರಾಯಣ, ಪ್ರ.: ಕಾಮಧೇನು, ಶೇಶಾದ್ರಿಪುರಂ, ಬೆಂಗಳೂರು 1999 – ಪುಟ – 104.

(7) ಕನ್ನಡ ಚಿತ್ರ ಕಾವ್ಯ –ಪೂರ್ವೋಕ್ತ – ಪುಟ–3

(8) ಶತಾವಧಾನಿ ಆರ್. ಗಣೇಶ್‌ರವರು ತಮ್ಮ 'ಕನ್ನಡದಲ್ಲಿ ಅಷ್ಟಾವಧಾನ' ಎಂಬ ಗ್ರಂಥದಲ್ಲಿ ಹೀಗೆ ವರ್ಗೀಕರಿಸಿದ್ದಾರೆ: (1) ಅರ್ಥಚ್ಛಲ, (2) ಶಬ್ದಚ್ಛಲ, (3) ಉಭಯಚ್ಛಲ (ಶಬ್ದಾರ್ಥಚ್ಛಲ) ಎಂದು ಮೂರು ಪ್ರಕಾರವಾಗಿ ವಿಭಾಗಿಸಿದ್ದಾರೆ – ಪುಟ 123 ರಿಂದ 174.

(9) ಕನ್ನಡ ಚಿತ್ರ ಕಾವ್ಯ –ಪೂರ್ವೋಕ್ತ – ಪುಟ 9.

(10) ಕನ್ನಡದಲ್ಲಿ ಅವಧಾನ ಕಲೆ, ಶತಾವಧಾನಿ ಆರ್.ಗಣೇಶ್, ಪ್ರ.: ಕರ್ನಾಟಕ ಸಂಘ, ಪುತ್ತೂರು – ಪುಟ–123 ರಿಂದ 176.

(11) ಪ್ರೊ.ಅ.ನಾ.ಜಿ.ಯವರ ಟಿಪ್ಪಣಿಗಳು – ಅ.ನಾ.ಜಿ.ಯವರು ಪ್ರಾಣಪ್ರಿಯ ಕಾವ್ಯವು ಎರಡನೇ ಗುಂಪಿಗೆ ಸೇರಿದೆ ಎನ್ನುತ್ತಾರೆ.

(12) ಸಂಸ್ಕೃತ ಸಾಹಿತ್ಯದ ಇತಿಹಾಸ – ಪೂರ್ವೋಕ್ತ – ಲೇ. ಆಚಾರ್ಯ ಬಲದೇವ ಉಪಾಧ್ಯಾಯ. ಬೆಂಗಳೂರು ವಿಶ್ವವಿದ್ಯಾಲಯ ಪ್ರಸಾರಾಂಗ – ಪುಟ 561.

(13) ಸಂಸ್ಕೃತ ಸಾಹಿತ್ಯದ ಇತಿಹಾಸ – ಪೂರ್ವೋಕ್ತ – ಪುಟ 483 ರಿಂದ – 489.

(14) ಕನ್ನಡದಲ್ಲಿ ಅವಧಾನ ಕಲೆ, ಪ್ರ: ಕರ್ನಾಟಕ ಸಂಘ, ಪುತ್ತೂರು –1998 – ಪುಟ–135.

(15) ಚತುಷಷ್ಠಿ ಕಲೆ – ಲೇ.ಪ್ರೊ. ಟಿ.ಎಸ್.ಸತ್ಯವತಿ 2002, – ಭಾರತೀಯ ವಿದ್ಯಾಭವನದ ಗಾಂಧೀಕೇಂದ್ರ, ಭಾರತೀಯ ವಿದ್ಯಾಭವನ, ಬೆಂಗಳೂರು–560001 – ಪುಟ 111.

(16) ಅರವತ್ತನಾಲ್ಕು ಕಲೆಗಳು–ಲೇ.ಮ.ಶ್ರೀಧರಮೂರ್ತಿ–1974, ಬೆಂಗಳೂರು ವಿಶ್ವವಿದ್ಯಾಲಯ ಪ್ರಸಾರಾಂಗ, ಬೆಂಗಳೂರು–ಪುಟ 38,

(17) ಪ್ರೊ.ಅ.ನಾ.ಜಿ.ಯವರ ಭಾಷಣ–12.11.1997 ಗಾಂಧೀಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು.

## ಕನ್ನಡ ನೇಮಿನಾಥ ಪುರಾಣಗಳಲ್ಲಿನ ವೈರಾಗ್ಯ ಪ್ರಸಂಗಗಳ ತೌಲನಿಕ ನೋಟ

22ನೇ ತೀರ್ಥಂಕರನಾದ ನೇಮಿನಾಥನನ್ನು ಕುರಿತು ಕನ್ನಡದಲ್ಲಿ ಸುಮಾರು ಒಂಬತ್ತಕ್ಕೂ ಹೆಚ್ಚು ಕಾವ್ಯಗಳಿವೆ. ಈ ಕಾವ್ಯಗಳು ಚಂಪೂ, ಸಾಂಗತ್ಯ, ಷಟ್ಪದಿ, ಗದ್ಯ, ಮೊದಲಾದ ಛಂದಸ್ಸುಗಳಲ್ಲಿದ್ದು ಒಂದೊಂದು ವಿಶಿಷ್ಟವಾದ ಕಾವ್ಯಗಳಾಗಿವೆ. ಇವುಗಳಲ್ಲಿ ಕೆಲವು ಕಾವ್ಯಗಳು ವಿಸ್ತಾರವಾಗಿದ್ದರೆ, ಕೆಲವೆಡೆ ನೇಮಿಕಥೆಯು ಸಂಕ್ಷೇಪವಾಗಿದೆ. ಕಥೆಗೆ ಅನುಸಾರವಾಗಿ ನೇಮಿನಾಥನ ವೈರಾಗ್ಯದ ಪ್ರಸಂಗವೂ ಕೆಲವೆಡೆ ಸಂಕ್ಷೇಪವಾಗಿ ಕೆಲವೆಡೆ ವಿಸ್ತಾರವಾಗಿ ಬಂದಿದೆ. ಒಂಬತ್ತು ಕಾವ್ಯಗಳಲ್ಲಿ ಗುಣವರ್ಮನ ನೇಮಿನಾಥ ಪುರಾಣವು ಅಲಭ್ಯ. ನೇಮಿಚಂದ್ರನ ನೇಮಿನಾಥ ಪುರಾಣವು 'ಕಂಸವಧೆ'ಯ ವರೆಗೆ ಮಾತ್ರ ಇದ್ದು, ಇದು 'ಅರ್ಧನೇಮಿ ಪುರಾಣ'ವೆಂದೇ ಪ್ರಸಿದ್ಧವಾಗಿದೆ. ಇದರಲ್ಲಿ ನೇಮಿನಾಥನ ಕಥೆಯೇ ಬರುವುದಿಲ್ಲ. ಇನ್ನು ಬ್ರಹ್ಮಣಾಂಕನೆಂದು ಪ್ರಸಿದ್ಧನಾಗಿರುವ ಚಂದ್ರಸಾಗರವರ್ಣಿಯ 'ಜಿನಭಾರತ'ದಲ್ಲಿ 'ಹರಿವಂಶ'ದ ಕಥೆಯೇ ಇಲ್ಲ. ಈ ಮೂರು ಕಾವ್ಯಗಳನ್ನು ಉಳಿದು ಮಂಗರಸನ ನೇಮಿಜಿನೇಶಸಂಗತಿ, ಬಂಧುವರ್ಮನ ಹರಿವಂಶಾಭ್ಯುದಯ, ಚಾವುಂಡರಾಯನ ಚಾವುಂಡರಾಯ ಪುರಾಣ, ಕರ್ಣಪಾರ್ಯನ ನೇಮಿನಾಥ ಪುರಾಣ ಹಾಗೂ ಸಾಳ್ವನ ಸಾಳ್ವ ಭಾರತಗಳಲ್ಲಿ ಬರುವ ನೇಮಿನಾಥನ ವೈರಾಗ್ಯದ ಪ್ರಸಂಗಗಳನ್ನೂ ಶ್ರೀ.ಪದ್ಮನಾಭಶರ್ಮರ 'ಪ್ರಾಣಪ್ರಿಯ' ಕಾವ್ಯ ಹಾಗೂ ಅದಕ್ಕೆ ಹಿನ್ನೆಲೆಯಾಗಿ ಶರ್ಮರು ಕೊಟ್ಟಿರುವ ನೇಮಿ ಕಥೆಗಳನ್ನು ಹೋಲಿಸಿ ನೋಡಿದಾಗ ನಮಗೆ ಕೆಲವು 'ಸಾಮ್ಯ' – 'ವೈಷಮ್ಯ'ಗಳು ಕಂಡು ಬರುತ್ತವೆ.

'ಪ್ರಾಣಪ್ರಿಯ' ಕಾವ್ಯವು ಕೇವಲ 48 ಪದ್ಯಗಳ ಒಂದು ಲಘು ಕಾವ್ಯವಾಗಿದ್ದು ಅದರ ಮೂರು ಪ್ರಮುಖ ಘಟನೆಗಳೆಂದರೆ (1) ರಾಜೀಮತಿಯ ಸಖಿಯರು ನೇಮಿನಾಥನಲ್ಲಿ ಮಾಡುವ ಪ್ರಾರ್ಥನೆ (2) ರಾಜೀಮತಿಯು ನೇಮಿನಾಥನನ್ನು ಪ್ರಾರ್ಥಿಸುವುದು (3) ನೇಮಿನಾಥನು ರಾಜೀಮತಿಗೆ ಉಪದೇಶಮಾಡುವುದು. ಈ ಘಟನೆಗಳನ್ನು ಒಳಗೊಂಡಂತೆ 'ಪ್ರಾಣಪ್ರಿಯ ಕಾವ್ಯ' ಹಾಗೂ ಇನ್ನುಳಿದ ನೇಮಿನಾಥ ಪುರಾಣಗಳಲ್ಲಿನ ವೈರಾಗ್ಯ ಪ್ರಸಂಗಗಳಲ್ಲಿ ಕಂಡುಬರುವ ಸನ್ನಿವೇಶಗಳೆಂದರೆ: (1) ವೈರಾಗ್ಯವನ್ನುಂಟು ಮಾಡುವ ಹಂಚಿಕೆ (2) ದಿಬ್ಬಣದ ವರ್ಣನೆ (3) ಉಗ್ರಸೇನ ಮಹಾರಾಜನ ಮಗಳೊಡನೆ ನೇಮಿಯ ವಿವಾಹವನ್ನೇರ್ಪಡಿಸುವುದು (4) ವೈರಾಗ್ಯಕ್ಕೆ ಕಾರಣವಾಗುವ ಪಶುಗಳ ದರ್ಶನ (5) ವೈರಾಗ್ಯೋದಯ (6) ರಾಜೀಮತಿಯ ದೀಕ್ಷಾಗ್ರಹಣ. ಈ ಸನ್ನಿವೇಶಗಳು ಬೇರೆ ಬೇರೆ ನೇಮಿಕಾವ್ಯಗಳಲ್ಲಿ (ಬೇರೆ ಬೇರೆ ರೀತಿಯಲ್ಲಿದೆ) ಭಿನ್ನವಾಗಿವೆ. ಈ ಒಂದೊಂದು ಪ್ರಸಂಗಗಳೂ ನೇಮಿನಾಥ ಪುರಾಣಗಳಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು ಈ ರೀತಿ ಗುರುತಿಸಬಹುದು:

1. **ವೈರಾಗ್ಯವನ್ನುಂಟು ಮಾಡುವ ಹಂಚಿಕೆ.**

ಜಲಕೇಳಿಯ ನಂತರ ಸತ್ಯಭಾಮೆ ಹಾಗೂ ನೇಮಿಯ ಸಂಭಾಷಣೆಯ ನಂತರದ ಘಟನೆಯಿಂದ ಶ್ರೀಕೃಷ್ಣನಲ್ಲಿ ವೈರಾಗ್ಯವನ್ನುಂಟು ಮಾಡುವ ಹಂಚಿಕೆ ಮೊಳೆಯುತ್ತದೆ.

ಸಂಸ್ಕೃತ, ಪ್ರಾಕೃತ ಹಾಗೂ ಕನ್ನಡ ಭಾಷೆಗಳಲ್ಲಿರುವ ಎಲ್ಲ ನೇಮಿನಾಥ ಪುರಾಣಗಳಿಗೂ 'ಜಿನಸೇನಾಚಾರ್ಯ ಹಾಗೂ ಗುಣಭದ್ರಚಾರ್ಯರ' ಮಹಾ ಪುರಾಣವೇ ಆಧಾರವೆಂಬುದು ಆ ಕಾವ್ಯಗಳ ಸನ್ನಿವೇಶಗಳಿಂದ ತಿಳಿದುಬರುತ್ತದೆ. ರತ್ನಸಿಂಹಮುನಿಗಳು ಸಂಸ್ಕೃತದಲ್ಲಿ ರಚಿಸಿರುವ ಪ್ರಾಣಪ್ರಿಯ ಕಾವ್ಯಕ್ಕೂ ಮಹಾ ಪುರಾಣವೇ ಆಧಾರ. ಅದರ ಅನುವಾದವಾದ ಶ್ರೀ ಪದ್ಮನಾಭ ಶರ್ಮರ 'ಪ್ರಾಣಪ್ರಿಯ ಕಾವ್ಯದ' ಹಿನ್ನೆಲೆಯ ಕಥೆಯಲ್ಲಿಯೂ ಮಹಾಪುರಾಣದಲ್ಲಿನಂತೆಯೇ ಶ್ರೀ ಕೃಷ್ಣನು ತನಗಿಂತ ಬಲಶಾಲಿಯಾದ ನೇಮಿನಾಥನು ತನ್ನ ರಾಜ್ಯಕ್ಕೆ ನಿಜವಾದ ಅಧಿಕಾರಿ. ಅವನು ತನ್ನ ರಾಜ್ಯವನ್ನು ಕಸಿದುಕೊಳ್ಳಬಹುದೆಂಬ ಭಯದಿಂದ ನೇಮಿನಾಥನಲ್ಲಿ ವೈರಾಗ್ಯವನ್ನುಂಟುಮಾಡುವ ಹಂಚಿಕೆಯನ್ನು ಮಾಡುತ್ತಾನೆ. ಇದಕ್ಕಾಗಿ ನೇಮಿನಾಥನ ವಿವಾಹವನ್ನು ಏರ್ಪಡಿಸುತ್ತಾನೆ.

"ಮಂಗರಸನ" ನೇಮಿಜಿನೇಶ ಸಂಗತಿಯಲ್ಲೂ ಶ್ರೀ ಕೃಷ್ಣ ನೇಮಿಕುಮಾರನು ತನಗಿಂತ ಬಲಶಾಲಿ. ಅವನು ತನ್ನ ರಾಜ್ಯವನ್ನು ಸೆಳೆದುಕೊಳ್ಳಬಹುದೆಂದು ಚಿಂತಿಸಿ ತನ್ನ ಅಣ್ಣನಾದ ಬಲರಾಮನಿಗೆ ಆ ವಿಷಯವನ್ನು ತಿಳಿಸುತ್ತಾನೆ. ಆಗ ಬಲರಾಮನು ನೇಮಿಕುಮಾರನಿಗೆ ವೈರಾಗ್ಯವುಂಟಾಗುವಂತೆ ಮಾಡೋಣ ಎಂದು ಹೇಳುತ್ತಾನೆ. ಈ ಮಾತಿನಿಂದ ಸಂತುಷ್ಟನಾದ ಕೃಷ್ಣನು ನೇಮಿಕುಮಾರನಿಗೆ ವಿವಾಹದ ಏರ್ಪಾಡು ಮಾಡುತ್ತಾನೆ.

ಆದರೆ ಬಂಧುವರ್ಮನ 'ಹರಿವಂಶಾಭ್ಯುದಯ'ದಲ್ಲಿ ಕೃಷ್ಣನು, ತನಗಿಂತಲೂ ಬಲಶಾಲಿಯೂ, ರಾಜ್ಯಕ್ಕೆ ನಿಜವಾದ ಅಧಿಕಾರಿಯೂ ಆದ ನೇಮಿನಾಥನು ತನ್ನ ರಾಜ್ಯವನ್ನು ಕಸಿದುಕೊಳ್ಳಬಹುದೆಂದು ಭಯಪಟ್ಟಾಗ 'ಬಲರಾಮನು' ನೇಮಿಯಲ್ಲಿ ವೈರಾಗ್ಯವನ್ನುಂಟುಮಾಡುವ ತಂತ್ರವನ್ನು ಮಾಡಿ ತಾನೇ ವಿವಾಹವನ್ನೇರ್ಪಡಿಸುತ್ತಾನೆ.

ಎಲ್ಲ ನೇಮಿನಾಥ ಪುರಾಣಗಳಲ್ಲಿಯೂ 'ಜಲಕೇಳಿಯ ಪ್ರಸಂಗ'ವು ನೇಮಿಕುಮಾರನು ಶ್ರೀ ಕೃಷ್ಣನಷ್ಟೇ ಬಲಶಾಲಿಯೆಂದು ನಿರೂಪಿಸಲು ಕಾರಣವಾಗುತ್ತದೆ. ಈ ಪ್ರಸಂಗಕ್ಕೂ ಮೊದಲು ಒಮ್ಮೆ ನೇಮಿಕುಮಾರನು ಒಡ್ಡೋಲಗದಲ್ಲಿದ್ದಾಗ ಕೆಲವರು ನೇಮಿಕುಮಾರನು ಬಾಹುಬಲದ ಪ್ರದರ್ಶನವನ್ನು ಮಾಡಬೇಕೆಂದು ಬೇಡಿಕೊಳ್ಳುತ್ತಾರೆ. ಆಗ ಕೆಲವರು ಭೀಮನು

ಅತ್ಯಂತ ಬಲಶಾಲಿ ಎಂದರೆ ಇನ್ನು ಕೆಲವರು ಶ್ರೀ ಕೃಷ್ಣನು ಅತ್ಯಂತ ಬಲಶಾಲಿ ಎನ್ನುತ್ತಾರೆ. ಆಗ ಕೃಷ್ಣನು ನೇಮಿಕುಮಾರನ ಬೆರಳನ್ನು ಮಡಿಸಲಾಗದೆ ಸೋತಿರುತ್ತಾನೆ.

ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ಈ ಶಕ್ತಿ ಪ್ರದರ್ಶನದ ಪ್ರಸಂಗದಲ್ಲಿ ಶ್ರೀ ಕೃಷ್ಣನೇ ಶಕ್ತಿ ಪ್ರದರ್ಶನದ ವಿಷಯವನ್ನೆತ್ತಿ ಅಪಮಾನಿತನಾಗುತ್ತಾನೆ. ಜಲಕೇಳಿಯ ಪ್ರಸಂಗದ ನಂತರದ ಘಟನೆಗಳಿಂದ ಭಯ ಭೀತನಾದ ಕೃಷ್ಣನು ತನಗಿಂತಲೂ ಸತ್ವಶಾಲಿಯೂ, ಕ್ರಮಗತವಾಗಿ ರಾಜ್ಯಕ್ಕೆ ಅಧಿಕಾರಿಯೂ ಆದ ನೇಮಿಯು ತನ್ನ ರಾಜ್ಯಾಧಿಕಾರಕ್ಕೆ ಮನಸ್ಸು ಮಾಡಿದರೆ ತಾನು ರಾಜ್ಯವನ್ನು ಕಳೆದು ಕೊಳ್ಳಬೇಕಾಗುತ್ತದೆ ಎಂದು ಚಿಂತಿಸತೊಡಗಿದನು. ಆಗ ಬಲರಾಮನು ಕೃಷ್ಣನ ಭಯವನ್ನು ಹೋಗಲಾಡಿಸಲು ನೇಮಿ ಕುಮಾರನಲ್ಲಿ ವೈರಾಗ್ಯವನ್ನುಂಟುಮಾಡುವ ತಂತ್ರವನ್ನು ಮಾಡುತ್ತಾನೆ. ಅದಕ್ಕಾಗಿ ಬಲರಾಮನೇ ವಿವಾಹದ ಏರ್ಪಾಡುಮಾಡುತ್ತಾನೆ.

ಎಲ್ಲ ನೇಮಿ ಕಾವ್ಯಗಳಲ್ಲಿಯೂ ಜಲಕ್ರೀಡೆಯ ಸುಂದರ ವರ್ಣನೆಯಿದ್ದರೆ, ಕರ್ಣಪಾರ್ಯನ ಕಾವ್ಯದಲ್ಲಿ ಪುಷ್ಪಕೇಳಿಯ ವರ್ಣನೆ ನೀಡಿರುವುದು ವಿಶೇಷವಾಗಿದೆ. ವನದ ಹಾಗೂ ಸರೋವರದ ಸುಂದರವಾದ ವರ್ಣನೆಯನ್ನು ಕರ್ಣಪಾರ್ಯ ಹಾಗೂ ಬಂಧುವರ್ಮನ ಕಾವ್ಯಗಳಲ್ಲಿ ಕಾಣಬಹುದು.

ಸಾಳ್ವ ಭಾರತದ ಭಾಗವಾದ ನೇಮಿನಾಥ ಪುರಾಣದಲ್ಲಿ ಶ್ರೀಕೃಷ್ಣನು ನೇಮಿಕುಮಾರನು ತನ್ನ ರಾಜ್ಯವನ್ನು ಬಯಸಿ ನನ್ನಿಂದ ಕಸಿದುಕೊಳ್ಳಬಹುದೆಂದು ಚಿಂತಿಸುತ್ತಿರುತ್ತಾನೆ. ಆಗ ಅವನ ಅಣ್ಣನಾದ ಬಲರಾಮನ ಸಲಹೆಯಂತೆ ನೇಮಿಕುಮಾರನಲ್ಲಿ ವೈರಾಗ್ಯ ಭಾವವು ಉಂಟಾಗುವಂತೆ ಮಾಡುವೆನು ಎಂದು ಕೃಷ್ಣನು ನೇಮಿಯ ವಿವಾಹವನ್ನು ಏರ್ಪಡಿಸುತ್ತಾನೆ. ಹೀಗೆ ವೈರಾಗ್ಯ ಭಾವವನ್ನುಂಟು ಮಾಡುವ ಉದ್ದೇಶದಿಂದಲೇ ಈ ಕಾವ್ಯಗಳಲ್ಲಿ ವಿವಾಹವನ್ನು ಏರ್ಪಡಿಸಿದರೆ 'ಚಾವುಂಡರಾಯಪುರಾಣ' ಹಾಗೂ 'ಮಹಾಪುರಾಣ'ಗಳಲ್ಲಿನ ಸನ್ನಿವೇಶವು ಭಿನ್ನವಾಗಿದೆ.

ಚಾವುಂಡರಾಯ ಪುರಾಣದಲ್ಲಿಯ ಜಲಕ್ರೀಡೆಯ ಪ್ರಸಂಗದಲ್ಲಿ ನೇಮಿಯು ತಾನುಟ್ಟ ಒದ್ದೆಯಾದ ವಸ್ತ್ರವನ್ನು ಸತ್ಯಭಾಮೆಗೆ ನೀಡಲು, ಅವಳು ಕುಪಿತಳಾಗಿ ಅವನನ್ನು ಭಂಗಿಸಿ ಮಾತನಾಡುತ್ತಾಳೆ. ಅವಳ ಮಾತಿನಿಂದ ಕುಪಿತನಾದ ನೇಮಿನಾಥನು ಅನನ್ಯಾಸಾಧಾರಣ ಅದ್ಭುತ ಕಾರ್ಯಗಳನ್ನು (ನಾಗಶಯ್ಯೆ ಏರುವುದೇ ಮೊದಲಾದವು) ಮಾಡುತ್ತಾನೆ. ಇದನ್ನು ಗಮನಿಸಿದ ಕೃಷ್ಣನು ಕುಮಾರನಲ್ಲಿ 'ರಾಗವುಂಟಾಗಿದೆ' ಎಂದು ತಿಳಿದು ವಿವಾಹವನ್ನು

ಏರ್ಪಡಿಸುತ್ತಾನೆ. ವಿವಾಹದ ಎರಡನೆಯ ದಿನ ಶ್ರೀ ಕೃಷ್ಣನಿಗೆ ನೇಮಿಕುಮಾರನು ತನ್ನ ರಾಜ್ಯವನ್ನು ಕಿತ್ತುಕೊಳ್ಳಬಹುದೆಂಬ ಶಂಕೆಯುಂಟಾಗಿ ವೈರಾಗ್ಯವನ್ನುಂಟುಮಾಡುವ ತಂತ್ರವನ್ನು ಆಲೋಚಿಸುತ್ತಾನೆ.

ಮಹಾಪುರಾಣದಲ್ಲಿ ಜಲಕ್ರೀಡೆಯ ಸಮಯದಲ್ಲಿ ನೇಮಿಕುಮಾರನು ಸತ್ಯಭಾಮೆಯೊಡನೆ ಕ್ರೀಡಿಸತೊಡಗುತ್ತಾನೆ. ಆಗ ಸತ್ಯಭಾಮೆಯು "ನಿನ್ನ ಪ್ರಿಯಳಲ್ಲಿ ಕ್ರೀಡಿಸುವಂತೆ ನನ್ನಲ್ಲಿ ಏತಕ್ಕೆ ಕ್ರೀಡಿಸುವೆ" ಎಂದು ಕೇಳಿದಾಗ ಕುಮಾರನು ಕುಟಿಲನಂತೆ ಉತ್ತರವನ್ನು ನೀಡುತ್ತಾನೆ. ನಂತರ ತನ್ನ ವಸ್ತ್ರವನ್ನು ಒಗೆಯಲು ಸತ್ಯಭಾಮೆಗೆ ಹೇಳುತ್ತಾನೆ. ಬೇರೆ ನೇಮಿಪುರಾಣ ಕಾವ್ಯಗಳಲ್ಲಿ ಕೃಷ್ಣನ ಸೂಚನೆಯಂತೆ ವಸ್ತ್ರವನ್ನು ನೀಡಿದರೆ, ಇಲ್ಲಿ ತಾನೇ ಸ್ವತಃ ನೀಡುತ್ತಾನೆ. ಇದರಿಂದ ಕುಪಿತಳಾದ ಸತ್ಯಭಾಮೆಯು ನೀನು ಹರಿಯಂತೆ ಸಾಹಸಗಳನ್ನು ಮಾಡಬಲ್ಲೆಯಾ ಎಂದಾಗ ಆಯುಧಶಾಲೆಯನ್ನು ಸೇರಿದ ನೇಮಿಯು ಸರ್ಪಶಯ್ಯೆಯನ್ನು ಏರಿ ಶಾರ್ಙ್ಗವನ್ನು ಆರೋಪಿಸಿ ಶಂಖವನ್ನೂ ಊದುತ್ತಾನೆ. ತಾನು ಬಲಶಾಲಿ ಎಂಬುದನ್ನು ನಿರೂಪಿಸುತ್ತಾನೆ. ಇದನ್ನು ಕಂಡ ಕೃಷ್ಣನು ನೇಮಿಕುಮಾರನ ಚಿತ್ತವು ರಾಗವುಳ್ಳದ್ದಾಗಿದೆ. ರಾಗಾಹಂಕಾರಗಳ ಲೇಶವೂ ವಿಕಾರಗಳಿಗೆ ಕಾರಣವಾಗುತ್ತದೆ ಎಂದು ಕುಮಾರನಿಗೆ ವಿವಾಹವನ್ನು ಏರ್ಪಡಿಸುವ ಯೋಚನೆಯನ್ನು ಮಾಡುತ್ತಾನೆ. ವೈರಾಗ್ಯ ಭಾವವನ್ನುಂಟುಮಾಡುವ ತಂತ್ರವನ್ನು ರೂಪಿಸಲು ಉಳಿದ ಕಾವ್ಯಗಳಲ್ಲಿ ವಿವಾಹವನ್ನು ಏರ್ಪಡಿಸುತ್ತಾನೆ. ಆದರೆ, ಮಹಾಪುರಾಣದಲ್ಲಿ ವಿವಾಹದ ಎರಡನೆಯ ದಿನ ಕೃಷ್ಣನು ರಾಜ್ಯ ಲೋಭದಿಂದ ವೈರಾಗ್ಯವನ್ನುಂಟು ಮಾಡುವ ಯೋಚನೆ ಮಾಡುತ್ತಾನೆ.



**2. ದಿಬ್ಬಣದ ವರ್ಣನೆ:**

ಪ್ರಾಣಪ್ರಿಯ ಕಾವ್ಯದ ಪೂರ್ವ ಕಥೆಯಾಗಿ ಶ್ರೀ ಕೃಷ್ಣನು ಸಮುದ್ರವಿಜಯನ ಒಪ್ಪಿಗೆಯನ್ನು ಪಡೆದು 'ಉಗ್ರ' ವಂಶದ ಉಗ್ರಸೇನ ಮಹಾರಾಜನ ಮಗಳಾದ ರಾಜೀಮತಿಯೊಡನೆ ವಿವಾಹವನ್ನು ಏರ್ಪಡಿಸುತ್ತಾನೆ. ಆಗ ಕುಮಾರನು ಕನ್ಯಾ ಸ್ವೀಕಾರಕ್ಕಾಗಿ 'ಅಶ್ವಶಕಟಾರೋಹಿಯಾಗಿ' ದಿವ್ಯ ರತ್ನಾಭರಣಗಳಿಂದ ಅಲಂಕೃತನಾಗಿ ಚಾಮರ ರನ್ನಗನ್ನಡಿ, ಸುವರ್ಣಕುಂಭ ಆದಿ ಸಮಸ್ತ ಮಂಗಲದ್ರವ್ಯಗಳನ್ನು ಹಿಡಿದ ದೇವನಾಗಮನುಜ ಸ್ತ್ರೀಯರಿಂದ ಪರಿವೃತನಾಗಿ ಅಟ್ಟಹಾಸದಿಂದ ಹೊರಡುತ್ತಾನೆ.

ಮಂಗರಸನ ನೇಮಿಜಿನೇಶಸಂಗತಿಯಲ್ಲಿಯೂ ದಿಬ್ಬಣದೊಡನೆ ದಿವ್ಯ ರತ್ನಾಭರಣಗಳಿಂದ ಅಲಂಕೃತನಾದ ನೇಮಿಕುಮಾರನು ಆನೆಯ ಮೇಲೆ ಕುಳಿತು ವಿವಾಹ

ಮಂಟಪದೆಡೆಗೆ ಹೊರಡುತ್ತಾನೆಂದು ಹೇಳಿದರೂ ಆ ಕಾವ್ಯದಲ್ಲಿ ಶಕಟಾರೋಹಿಯಾದ ಕುಮಾರನ ಚಿತ್ರವನ್ನೇ ಕೊಟ್ಟಿದ್ದಾರೆ. ಇಲ್ಲಿ ದೇವತಾಸ್ತ್ರೀಯರು ನೇಮಿಕುಮಾರನೊಡನೆ ಚಾಮರ ಬೀಸುತ್ತಾ ನಡೆದಿರುತ್ತಾರೆ. ಹೀಗೆ ಹೊರಟ ನೇಮಿಕುಮಾರನ್ನು ವರಿಸಲು ಉಗ್ರಸೇನ ಮಹಾರಾಜನ ಮಗಳಾದ ರಾಜೀಮತಿಯೊಂದಿಗೆ ಐನೂರು ಜನ ರಾಜಕುಮಾರಿಯರೊಡನೆ ವಿವಾಹವನ್ನು ಏರ್ಪಡಿಸುತ್ತಾನೆ. ನೇಮಿಕುಮಾರನು ಪಟ್ಟದಾನೆಯನ್ನು ಏರಿ ಛತ್ರ – ಚಾಮರಾದಿ ರಾಜಚಿಹ್ನೆಗಳು, ಮಂಗಳವಾದ್ಯ, ಕನಕ ಕಳಶಗಳೊಂದಿಗೆ ಬಲದೇವ, ವಾಸುದೇವ, ಸಮುದ್ರ ವಿಜಯ ಮೊದಲಾದ ಹಿರಿಯರೊಡನೆ ಮದುವೆಗೆ ಹೊರಡುತ್ತಾನೆ.

ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ದಿಬ್ಬಣದ ವರ್ಣನೆ ಈ ರೀತಿಯಿದೆ. ದೇವೇಂದ್ರನು ನೇಮಿಕುಮಾರನಿಗೆ ಅನರ್ಘ್ಯವಾದ ರತ್ನಾಭರಣಗಳನ್ನು ಕಾಣಿಕೆಯಾಗಿ ಕಳುಹಿಸುತ್ತಾನೆ. ಆ ರತ್ನಾಭರಣಗಳಿಂದಲೇ ಅಲಂಕೃತನಾದ ನೇಮಿಕುಮಾರನು ದಿಗ್ಗಜದಂತಿರುವ ಆನೆಯನ್ನು ಏರಿ ಚಿನ್ನದ ದಂಡವಿರುವ ಬೆಳ್ಗೊಡೆಗಳು, ಚಿನ್ನದ ಚಾಮರಗಳನ್ನು ಹಿಡಿದು ಬೀಸುತ್ತಿರುವ ದೇವಕುಮಾರರು, ಸುವರ್ಣಕಲಶಗಳನ್ನು ಹೊತ್ತುಕೊಂಡು ವಿಲಾಸದಿಂದ ನಡೆಯುತ್ತಿರುವ ಮುತ್ತೈದೆಯರನ್ನು ಒಳಗೊಂಡ ದಿಬ್ಬಣವು ಸಂಭ್ರಮದಿಂದ ಸಾಗುತ್ತದೆ. [ಇಲ್ಲಿ ಶಿವದೇವಿ ಹಾಗೂ ಕನ್ನೆಯರ ತಾಯಿಯರು ಬಾಗಿನಗಳನ್ನು ಕೊಡುತ್ತಿದ್ದ ವಿವರವಿರುವುದರಿಂದ ಈ ಕಾವ್ಯದಲ್ಲಿಯೂ ವಿವಾಹವಿಧಿಗಳು ಆರಂಭವಾಗಿದ್ದುದರ ಸೂಚನೆಯಿದೆ].

ಹೀಗೆ ದಿಬ್ಬಣದೊಂದಿಗೆ ಬರುವ ನೇಮಿಕುಮಾರನನ್ನು ವರಿಸಲು ರಾಜೀಮತಿ ಮತ್ತು ಐನೂರು ರಾಜಪುತ್ರಿಯರು ಸಿದ್ಧರಾಗುತ್ತಾರೆ. ದೇವೇಂದ್ರನು ನೇಮಿಕುಮಾರನಿಗೆ ವಿವಾಹ ಕಾಣಿಕೆ ಕಳುಹಿಸಿಕೊಡುವ ಪ್ರಸಂಗ ಕರ್ಣಪಾರ್ಯ ಹಾಗೂ ಸಾಳ್ವ ಭಾರತದಲ್ಲಿ ಮಾತ್ರ ಇದೆ – ಬೇರೆ ಕಾವ್ಯಗಳಲ್ಲಿ ಇಲ್ಲ.

ಚಾವುಂಡರಾಯ ಪುರಾಣದಲ್ಲಿ ಪ್ರಾಪ್ತವಯಸ್ಕನಾದ ನೇಮಿಕುಮಾರನಿಗೆ ವಿವಾಹ ಆಲೋಚನೆಯನ್ನು ಮಾಡಿ ಕೃಷ್ಣನು ತಾನೇ ಉಗ್ರಸೇನ ಮಹಾರಾಜನ ಮಗಳಾದ ರಾಜೀಮತಿ ಹಾಗೂ ಐನೂರು ರಾಜಕುಮಾರಿಯರೊಡನೆ ವಿವಾಹವನ್ನು ಏರ್ಪಾಡುಮಾಡುತ್ತಾನೆ. ನೇಮಿನಾಥನ ತಂದೆಯಾದ ಸಮುದ್ರವಿಜಯನಿಗೆ ನೇಮಿಯ ವಿವಾಹದ ವಿಷಯವನ್ನು ಮೊದಲೇ ತಿಳಿಸಿ ಒಪ್ಪಿಗೆ ಪಡೆಯುವುದಿಲ್ಲ. ಉಳಿದ ಕಾವ್ಯಗಳಿಗೆ ಹೋಲಿಸಿದರೆ

ಚಾವುಂಡರಾಯ ಪುರಾಣದಲ್ಲಿ ನೇಮಿ ವೈರಾಗ್ಯದ ಪ್ರಸಂಗವು ಅತ್ಯಂತ ಸಂಕ್ಷಿಪ್ತವಾಗಿ ಕೇವಲ ಒಂದೂವರೆ ಪುಟಗಳಲ್ಲಿ, ಜಲಕ್ರೀಡೆ, ನೇಮಿನಾಥನು ಮಾಡುವ ಅಸಾಧಾರಣ ಕಾರ್ಯಗಳು ವಿವಾಹದ ಏರ್ಪಾಡು ವೈರಾಗ್ಯದ ಉದಯ ಎಲ್ಲವನ್ನೂ ಹೇಳಬಿಟ್ಟಿರುವುದರಿಂದ ಇಲ್ಲಿ ಜಲಕ್ರೀಡೆಯ ವರ್ಣನೆಯಾಗಲೀ, ದಿಬ್ಬಣದ ವರ್ಣನೆಯಾಗಲೀ ಇಲ್ಲ. ಇಲ್ಲಿ ರಾಜೀಮತಿಯೊಡನೆ ವಿವಾಹವೇರ್ಪಡಿಸಿದ ಸಂಗತಿಯಿದೆ. ಉಳಿದ ಐನೂರು ಜನ ರಾಜಪುತ್ರಿಯರ ವಿವಾಹದ ಬಗೆಗೆ ಹೇಳಿಕೆಯಿಲ್ಲ. [ಇಲ್ಲಿ ಮದುವಣಗಿತ್ತಿ ರಾಜೀಮತಿಯೊಬ್ಬಳೇ].

ಮಹಾಪುರಾಣದಲ್ಲಿ ನೇಮಿಕುಮಾರನು ಅಸಾಧಾರಣ ಕಾರ್ಯಗಳನ್ನು ಮಾಡಲು ಜಲಕ್ರೀಡೆಯ ಸಮಯದಲ್ಲಿ ಸತ್ಯಭಾಮೆಯು ಆಡುವ ಮಾತುಗಳು ಮಾತ್ರವೇ ಕಾರಣವಾಗುವುದಿಲ್ಲ. ಅವನ ಮನಸ್ಸು ರಾಗದಿಂದ ಕೂಡಿರುತ್ತದೆ. ಅವನು ತನ್ನ ಔನ್ನತ್ಯವನ್ನು ಅನ್ಯರಿಗೆ ತಿಳಿಸ ಬೇಕಾಗಿರುತ್ತದೆ. ಅದಕ್ಕಾಗಿ ನಾಗಶಯ್ಯೆಯನ್ನೇರಿ ಶಾರ್ಙ್ಗ ಧನಸ್ಸನ್ನು ಆರೋಪಿಸಿ, ಬೃಹತ್ ಶಂಖವನ್ನು ಪೂರೈಸುತ್ತಾನೆ. ಇದನ್ನು ಗಮನಿಸಿದ ಕೃಷ್ಣನು ಕುಮಾರನು ವಿವಾಹಕಲ್ಯಾಣ ಯೋಗ್ಯನಾದನೆಂದು ಭಾವಿಸಿ ತಾನೇ ಉಗ್ರ ವಂಶದ ಉಗ್ರಸೇನ ಮಹಾರಾಜನ ಮನೆಗೆ ಹೋಗಿ "ತ್ರಿಲೋಕಾಧಿಪತಿಯಾದ ನೇಮಿಗೆ ರಾಜೀಮತಿಯು ಪ್ರಿಯಳಾಗಿರಲಿ" ಎಂದು ಕೇಳುತ್ತಾನೆ.

ಆಗ ಉಗ್ರಸೇನ ಮಹಾರಾಜನು "ಪ್ರಭುವೆ! ತ್ರಿಖಂಡಗಳಲ್ಲಿ ಜನಿಸಿರುವ ರತ್ನಗಳಿಗೆ ನೀನು ಒಡೆಯ. ನಮಗಂತು ವಿಶೇಷವಾಗಿ ಒಡೆಯ. ಪ್ರಕೃತ ವಿಷಯಕ್ಕೆ ನೀನೆ ಪ್ರಭುವಾಗಿರುತ್ತೀಯೆ. ನಾವಾರು?" ಎಂದು ತನ್ನ ಒಪ್ಪಿಗೆಯನ್ನು ಸೂಚಿಸುತ್ತಾನೆ. ಇಲ್ಲಿಯೂ ಕೃಷ್ಣನು ಸಮುದ್ರವಿಜಯನ ಒಪ್ಪಿಗೆಯನ್ನು ಪಡೆಯುವುದಿಲ್ಲ ಹಾಗೂ ದಿಬ್ಬಣದ ವರ್ಣನೆಯೂ ಇಲ್ಲ. ಇದಕ್ಕೆ ಬದಲಾಗಿ ನೇಮಿಯು 'ದಿಗವಲೋಕನಕ್ಕೆ' ಹೊರಡುವಾಗಿನ ವರ್ಣನೆಯನ್ನು ನೀಡಲಾಗಿದೆ.

ದೇವೇಂದ್ರನು ಕಳುಹಿಸಿದ ರತ್ನಾಭರಣಗಳನ್ನು ದಿವ್ಯ ವಸ್ತ್ರಗಳನ್ನು ಕೊಟ್ಟು ದಿವ್ಯವಾದ ಅನುಲೇಪನಗಳಿಂದ ಕೊರಳಲ್ಲಿ ತೋರವಾದ ಮುತ್ತಿನ ಹಾರವನ್ನು ಹಾಕಿಕೊಂಡು ಸುಂದರವಾಗಿ ಅಲಂಕರಿಸಿಕೊಂಡ ನೇಮಿಕುಮಾರನನ್ನು ಯದುಕುಲದ ರಾಜರುಗಳು ಆನೆಯ ಮೇಲೆ ಕುಳ್ಳಿರಿಸಿದರು. ದಿವ್ಯ ಚಾಮರವನ್ನು ಬೀಸುತ್ತಾ, ಘನವಾದ ಬೆಳ್ಗೊಡೆ, ಕಲಶ ಕನ್ನಡಿಗಳನ್ನು ಹಿಡಿದು ಶೋಭನಗಳನ್ನು ಹಾಡುತ್ತ ಬರುತ್ತಿರುವ ಸ್ತ್ರೀಯರು.

ನರ್ತಕಿಯರೊಡಗೂಡಿದ ದಿಬ್ಬಣವು ಹೊರಟಿತೆಂದು ಸಾಳ್ವ ಭಾರತದಲ್ಲಿ ಸುಂದರವಾಗಿ ವರ್ಣಿಸಲಾಗಿದೆ. ಹೀಗೆ ಮದುವೆಯ ದಿಬ್ಬಣದ ವರ್ಣನೆ ಭಿನ್ನಭಿನ್ನವಾಗಿದೆ.

**3. ವೈರಾಗ್ಯಕ್ಕೆ ಕಾರಣವಾಗುವ ಪಶುಗಳ ದರ್ಶನ:**

ಪ್ರಾಣಪ್ರಿಯ ಕಾವ್ಯದ ಹಿನ್ನೆಲೆಯ ಕಥೆಯಲ್ಲಿ, ಮಂಗರಸ ನೇಮಿ ಜಿನೇಶ ಸಂಗತಿ, ಬಂಧುವರ್ಮನ ಹರಿವಂಶೋದಯದಲ್ಲಿ, ಕರ್ಣಪಾರ್ಯನ ನೇಮಿನಾಥಪುರಾಣ ಹಾಗೂ ಸಾಳ್ವ ಭಾರತದಲ್ಲಿ ಅಲಂಕಾರಗೊಂಡ ನೇಮಿಯು ದಿಬ್ಬಣದೊಂದಿಗೆ ವಿವಾಹ ಮಂಟಪದೆಡೆಗೆ ಹೋಗುತ್ತಿರುವಾಗ ದಾರಿಯಲ್ಲಿ ಹಸಿವು ಬಾಯಾರಿಕೆಗಳಿಂದ ಹುಯ್ಯಲಿಡುತ್ತಿರುವ ಮುಗ್ಧ ಪ್ರಾಣಿಗಳ ದರ್ಶನವಾಗುತ್ತವೆ.

ಮಹಾಪುರಾಣದಲ್ಲಿ ವಿವಿಧಾಭರಣಗಳಿಂದಲೂ, ಕೆಂಪು ನೈದಿಲೆ ಮಾಲೆಗಳಿಂದ ಅಲಂಕೃತನಾಗಿ ವಿವಿಧ ವರ್ಣಗಳನ್ನುಳ್ಳ ಪಲ್ಲಕ್ಕಿಯನ್ನೇರಿ ಸಾಮಂತ ರಾಜಪುತ್ರರು ಹಾಗೂ ಸಮವಯಸ್ಕರೊಡನೆ ನೇಮಿಯು ದಿಗವಲೋಕನಕ್ಕೆ ಹೊರಡುತ್ತಾನೆ. ಈ ಎರಡೂ ಕಾವ್ಯಗಳಲ್ಲೂ ದಿಗವಲೋಕನಕ್ಕೆ ಹೊರಟಾಗ ನೇಮಿಕುಮಾರನು ಹಸಿವು ಬಾಯಾರಿಕೆಗಳಿಂದ ಅರಚುತ್ತಿರುವ ಪ್ರಾಣಿಗಳನ್ನು ಕೂಡಿಹಾಕಿರುವುದನ್ನು ನೋಡುತ್ತಾನೆ.

ಹೀಗೆ ಪ್ರಾಣಿಗಳನ್ನು ನೋಡಿದ ದಯಾಮಯನಾದ ನೇಮಿನಾಥನು ಆ ಪ್ರಾಣಿಗಳನ್ನು ಅಲ್ಲಿಗೆ ಯಾರು ತಂದರು? ಏಕೆ ತಂದರು ಎಂದು ಆ ಪ್ರಾಣಿಗಳನ್ನು ನೋಡಿಕೊಳ್ಳುತ್ತಿದ್ದ ಚಾರರನ್ನು ಕೇಳಲು ಚಾವುಂಡರಾಯ ಪುರಾಣವೊಂದನ್ನುಳಿದು ಉಳಿದ ನೇಮಿನಾಥ ಪುರಾಣಗಳಲ್ಲಿ ಚಾರರು "ನಿಮ್ಮ ವಿವಾಹಕ್ಕೆ ಬರುವ ಮಾಂಸಾಹಾರಿಗಳ ಭೋಜನಕ್ಕೆ ತಂದಿರುವೆವೆಂದು ಹೇಳುತ್ತಾರೆ.

ಆದರೆ ಚಾವುಂಡರಾಯ ಪುರಾಣದಲ್ಲಿ "ಈ ಪ್ರಾಣಿಗಳನ್ನು ನಿಮ್ಮ ಕ್ರೀಡಾರ್ಥ ತಂದೆವು" ಎಂದು ಆ ಪಶುಗಳನ್ನು ನೋಡಿಕೊಳ್ಳುತ್ತಿದ್ದ ಚಾರರು ಹೇಳುತ್ತಾರೆ. ವಿವಾಹದ ಭೋಜನಕ್ಕೆಂದು ಮುಗ್ಧಪ್ರಾಣಿಗಳನ್ನು ಕೊಲ್ಲುವ ಮಾತನ್ನು ಕೇಳುತ್ತದ್ದಂತೆಯೇ ಕುಮಾರನ ಮನಸ್ಸಿನಲ್ಲಿ ನಿರ್ವೇಗವುಂಟಾಗುತ್ತದೆ. ಅವನು ತನ್ನ ಮನೆಗೆ ಹಿಂತಿರುಗುತ್ತಾನೆ. ವಿವಾಹದ ಬಗೆಗೆ ನಾಸಕ್ತನಾಗುತ್ತಾನೆ.

**4. ವೈರಾಗ್ಯೋದಯ :**

ತನ್ನ ವಿವಾಹ ಭೋಜನಕ್ಕೆಂದು ಮುಗ್ಧ ಪ್ರಾಣಿಗಳನ್ನು ವಧಿಸುವರೆಂಬ ವಿಷಯವನ್ನು ತಿಳಿದು ವೈರಾಗ್ಯವನ್ನು ಪಡೆದ ನೇಮಿಕುಮಾರನು 'ಪ್ರಾಣಪ್ರಿಯ ಕಾವ್ಯ'ದ ಹಿನ್ನೆಲೆ ಕಥೆಯಲ್ಲಿ "ಮುಗ್ಧ ಪಶುಗಳನ್ನು ಕೊಂದು ಮದುವೆಯಾಗಿ ಸಂತೋಷಪಡುವುದು ಪಾಪ" ಎಂದು ಹೇಳಿ ತನ್ನ ಅರಮನೆಗೆ ಹಿಂತಿರುಗುತ್ತಾನೆ.

ಹಸಿವು ಬಾಯಾರಿಕೆಗಳಿಂದ ನರಳುತ್ತಿದ್ದ ಮೂಕಪ್ರಾಣಿಗಳನ್ನು ಅಲ್ಲಿಗೆ ತಂದ ಕಾರಣವನ್ನು ಅರಿತ ನೇಮಿಯ ಮಾತುಗಳು ಮಂಗರಸನ ನೇಮಿಜಿನೇಶ ಸಂಗತಿಯಲ್ಲಿ ಈ ರೀತಿ ಇವೆ: ಇನಿತು ಮೃಗವನೆಲ್ಲ ಹತಿಸಿ ನಾವು ಮದುವೆಯನು ಅನುಕರಿಸುವುದು "ಪ್ರಥಮ ಚುಂಬನದೊಳು ಪಲ್ಮುರಿದಂತಾಗುತ್ತದೆ. ಅನ್ಯಾಯದಿಂದ. ನನ್ನ ಸ್ವಲ್ಪ ಸುಖಕ್ಕಾಟಿಸುವ ಕನ್ನೆಯರೊಳು ಕಲ್ಯಾಣವಾಗುವ ಬಗೆ ಚೆನ್ನಾಯ್ತೆಂದೆಣಿಸಿ" ಮುಕ್ತಿಲಕ್ಷ್ಮಿಯನ್ನು ವರಿಸುತ್ತಾನೆ.

ಇದೇ ಮಾತುಗಳು ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿಯೂ ಕಂಡುಬರುತ್ತದೆ. "ಹೀಗೆ ಮೃಗಗಳನ್ನು ನಿರ್ದಯವಾಗಿ ಕೊಂದು ವಿವಾಹವಾದರೆ ನನಗೆ ಮೊದಲ ಚುಂಬನದಲ್ಲಿಯೆ ಹಲ್ಲುಮುರಿದಂತಾಯ್ತು – ದಿಟಂ ಪ್ರಥಮ ಚುಂಬನದೊಳೆ ದಲ್ ದಂತಭಂಗವಾದಂತೆ – ಈ ಪ್ರಾಣಿಗಳಿಗೆಲ್ಲ ಸಾವನ್ನು ತರುವ ಈ ಮದುವೆ ನನಗೆ ದುರ್ಗತಿಯನ್ನು ಅತ್ಯುಗ್ರವಾದ ದುಃಖಾತಿಶಯವನ್ನು ತಂದೊಡ್ಡುವುದು" ಎಂದು ಮುಕ್ತಿ ಸಂಪತ್ತಿಗೆ ಕಾರಣವಾದ ವೈರಾಗ್ಯವನ್ನು ತಾಳುವನು.

ಚಾವುಂಡರಾಯ ಪುರಾಣದಲ್ಲಿ ಪಶುಗಳನ್ನು ವಿವಾಹ ಮಂಟಪದ ಬಳಿ ತರಲು ಕಾರಣವನ್ನರಿತ ನೇಮಿನಾಥನು ತಕ್ಷಣವೇ ನಿರ್ವೇಗದಿಂದ ರಾಜಭವನಕ್ಕೆ ಹಿಂತಿರುಗಿ 'ಪರಿನಿಷ್ಕ್ರಮಣ ಕಲ್ಯಾಣ'ವನ್ನು ಹೊಂದುತ್ತಾನೆ.

ಇದೇ ಪ್ರಸಂಗವು ಬಂಧುವರ್ಮನಲ್ಲಿ ಹೀಗೆ ಬರುತ್ತದೆ: "ಮುಗ್ಧ ಪಶುಗಳನ್ನು ಕೊಂದು ನನ್ನ ವಿವಾಹ ಭೋಜನಕ್ಕೆ ಉಪಯೋಗಿಸಿದರೆ ನರಕಗಳಿಗೆ ಹೋಗುವೆನು. ಸಂಸಾರದ ಭೋಗ, ಸ್ತ್ರೀ ಸಂಸರ್ಗದಿಂದ ಬಂದೊದಗುವ ಅಘಬಂಧವನ್ನು ಬಿಡಿಸಿಕೊಳ್ಳದಿದ್ದರೆ ಮೋಕ್ಷವನ್ನು ಪಡೆಯಲು ಸಾಧ್ಯವೇ ಇಲ್ಲ ಎಂದು ನೇಮಿಕುಮಾರನು ವೈರಾಗ್ಯವನ್ನು ತಾಳುವನು.

'ಸಾಳ್ವ ಭಾರತದ' ಭಾಗವಾದ ನೇಮಿನಾಥ ಪುರಾಣ ಹಾಗೂ 'ಮಹಾಪುರಾಣಗಳಲ್ಲಿ' ವಿವಾಹದ ಸಮಯದಲ್ಲಿ ಹಸಿವು ಬಾಯಾರಿಕೆಗಳಿಂದ ನರಳುತ್ತಿರುವ ಪಶುಗಳನ್ನು ಅಲ್ಲಿ ತಂದಿರಿಸಿರುವುದು ಶ್ರೀ ಕೃಷ್ಣನ ತಂತ್ರವೇ ಎಂದು ನೇಮಿನಾಥನು ಊಹಿಸುತ್ತಾನೆ. ಸಾಳ್ವ ಭಾರತದಲ್ಲಿ ಕೃಷ್ಣನ ತಂತ್ರವನ್ನು ಊಹಿಸಿದ ನೇಮಿಕುಮಾರನು "ಈ ತಂತ್ರದ ಬಲೆಗೆ ನೊಳವನಲ್ಲದೆ ಭದ್ರಗಜ ಸಿಲುಕುವುದೆ" ಎಂದು ಕೇಳುವನು. ಈ ಧರೆಯು ನನ್ನದು ಎಂದು ಮನಸ್ಸಿನಲ್ಲಿ ಎಂದುಕೊಂಡರೂ "ತಿರುಕಂಗಾದೆಡೆಯು ಸಂಜನಿಸುವುದು" ಎಂದು ಆಲೋಚಿಸಿ ವೈರಾಗ್ಯವನ್ನು ತಾಳುವನು.

ಮಹಾಪುರಾಣದಲ್ಲಿ ಕೃಷ್ಣನ ದುಷ್ಟ ವ್ಯವಹಾರವನ್ನು ಊಹಿಸಿ "ದುಷ್ಟರ ವ್ಯಾಪಾರವು ಕಷ್ಟಕರವಾದುದು – ಕಷ್ಟಂ ದುಷ್ಟವಿಚೇಷ್ಟಿತಮ್ – ಎಂದುಕೊಂಡು ವೈರಾಗ್ಯವನ್ನು ತಳೆದು ತನ್ನ ಮನೆಗೆ ಹಿಂದಿರುಗುತ್ತಾನೆ. ತನ್ನ ಹಿಂದಿನ ಭವಗಳನ್ನು ಸ್ಮರಿಸಿ ನಡುಗಿ ಪರಿನಿಷ್ಕ್ರಮಣವನ್ನು ಹೊಂದುತ್ತಾನೆ.

**ಪರಿನಿಷ್ಕ್ರಮಣದ ನಂತರ ನೇಮಿನಾಥನ ಉಪದೇಶ**

ವಿವಾಹದ ಎರಡನೆಯ ದಿನ ಪಾಣಿಗ್ರಹಣಕ್ಕಾಗಿ ಹೊರಟ ಮಗನು ವೈರಾಗ್ಯ ತಳೆದು ಮನೆಗೆ ಹಿಂತಿರುಗಿ ಬಂದುದನ್ನು ಕಂಡ ಸಮುದ್ರ ವಿಜಯ, ಬಲದೇವ, ವಾಸುದೇವರು ಬೆಕ್ಕಸ ಬೆರಗಾದರೆ ತಾಯಿ ಶಿವದೇವಿ ಮೂರ್ಛೆ ಹೋಗುತ್ತಾಳೆ. ಈ ಘಟನೆ ಎಲ್ಲ ನೇಮಿಪುರಾಣಗಳಲ್ಲಿಯೂ ಸಾಮಾನ್ಯವಾದ ಸಂಗತಿ. ವೈರಾಗ್ಯ ತಳೆದ ಮಗನಿಗೆ ಬುದ್ಧಿ ಹೇಳಲು ಪ್ರಯತ್ನಿಸಿದ ತಂದೆತಾಯಿಗಳಿಗೆ (ಕರ್ಣಪಾರ್ಯನಲ್ಲಿ ಮಾತ್ರ) ಪರಿನಿಷ್ಕ್ರಮಣ ಕಲ್ಯಾಣವನ್ನು ಏರ್ಪಡಿಸಿದ ದೇವತೆಗಳೇ "ತ್ರಿಭುವನ ಸ್ವಾಮಿಯಾಗಲಿರುವ ನಿಮ್ಮ ಮಗ ತಪಸ್ಸಿಗೆ ಹೋಗದೆ ನಿಲ್ಲುವನಲ್ಲ (ಅನಿವಾರ್ಯ) " ಎಂಬುದನ್ನು ತಿಳಿಸುತ್ತಾರೆ.

ನಂತರ ಅವನೂ ಸಹ ತನ್ನ ತಂದೆ ತಾಯಿಗಳಿಗೆ ತಾನು ತ್ರಿಜ್ಞಾನಧಾರಿಯೆಂದು, ಹಿಂದಿನ ಭವಾವಳಿಗಳ ಬಗೆಗೆ ಹಾಗೂ ಸಂಸಾರದ ಬಂಧನ ಅನಿತ್ಯವೆಂದು ಉಪದೇಶಿಸುತ್ತಾನೆ. ಹೀಗೆಯೇ ಸಾಳ್ವ ಭಾರತದಲ್ಲಿಯೂ ಸಂಸಾರ ಸ್ವರೂಪವನ್ನು ಹೇಳಿ ಅದರಿಂದ ದೊರಕುವ ಆನಂದ ಅಶಾಶ್ವತ ಎಂಬುದನ್ನು ತಂದೆತಾಯಿಯರಿಗೆ ಮನಗಾಣಿಸಿ ಮೋಕ್ಷಲಕ್ಷ್ಮಿಯನ್ನೇ ಸೇರುವೆನೆಂದು ಹೇಳುವನು.

ಮಹಾಪುರಾಣದಲ್ಲಿ ಉಪದೇಶದ ಪ್ರಸಂಗವು ಬರುವುದಿಲ್ಲ. ಇನ್ನುಳಿದ ನೇಮಿಕಾವ್ಯಗಳಾದ ಕರ್ಣಪಾರ್ಯನ ನೇಮಿನಾಥ ಪುರಾಣ ಹಾಗೂ ನೇಮಿಜಿನೇಶ ಸಂಗತಿಗಳಲ್ಲಿ ನೇಮಿನಾಥನು ಮಾಡುವ ಉಪದೇಶದಲ್ಲಿ ಸಾಮ್ಯತೆ ಕಂಡುಬರುತ್ತದೆ. ಎರಡೂ ಕಾವ್ಯಗಳಲ್ಲಿ 'ಐಶ್ವರ್ಯ ಹಾಗೂ ಸಂಸಾರದ ಸುಖ ಮಂಜಿನಂತೆ ನಶ್ವರ ಎಂಬುದೂ ಬಂಧು ಬಾಂಧವರು ಕೇವಲ ಸಂಜೆಯ ಸೊಬಗಿನಂತೆ ಎಂದೂ ಸುಂದರವಾಗಿ ಹೇಳಿದ್ದಾನೆ. ಆ ಉಪದೇಶಗಳು ಹೀಗಿವೆ:

ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ: "ವಿವಾಹವು ಅಪರಿಮಿತವಾದ ಆಪತ್ತನ್ನು ತರುವುದು. ಆದ್ದರಿಂದ ಈ ವಿವಾಹವನ್ನು ತೊರೆದು ಮೋಕ್ಷಲಕ್ಷ್ಮಿಯನ್ನು ವಿವಾಹವಾಗುತ್ತೇನೆ. ಹೆಂಡತಿಯೆಂಬುದು ಉಗ್ರವಾದುದು. ಸಂಸಾರವೆಂಬ ಮಹಾಸಾಗರದಲ್ಲಿ ನನ್ನನ್ನು ಒಯ್ದು ಅದ್ದುವುದು. ಈ ಅಪಾರವಾದ ಹೆಗ್ಗಡಲನ್ನು ಈಸುವವರು ಯಾರು ಹೇಳಿ? ಸಂಸಾರ ಸುಖ ಸಂಜೆಯ ಸೊಬಗಿನಂತೆ, ಮಂಜಿನಂತೆ ನಶ್ವರವಾದುದು. **ಮೋಕ್ಷ ಅಮೃತದ ಸಮುದ್ರ**. ಬಂಧುಗಳನ್ನು ಪಡೆಯುವುದು ಜೀವ – ಆತ್ಮನಲ್ಲ –ಎಂದರೆ ಬಂಧುಗಳಿಂದ ಬಂಧವುಂಟಾಗುತ್ತದೆ. 'ಚತುರ್ಗತಿಗಳಲ್ಲೂ ದುಃಖ ಕಾಳ್ಗಿಚ್ಚಿನಂತೆ ಸುತ್ತಿಕೊಳ್ಳುತ್ತದೆ.' (1)

ಮಂಗರಸನ ನೇಮಿಜಿನೇಶ ಸಂಗತಿಯಲ್ಲಿ: ವೈರಾಗ್ಯವನ್ನು ತಳೆದ ರಾಜಕುಮಾರನು "ಐಶ್ವರ್ಯ ಮಂಜಿನ ಬೆಳಕಿನಂತೆ ಕ್ಷಣ ಭಂಗುರವಾದದ್ದು. ಮಹದೈಶ್ವರ್ಯವು ಮಂಜಿನಂತೆ. ಸಕಲ ಬಂಧುಗಳ ಬಾಂಧವ್ಯವು ಸಂಜೆಯ ಸೊಬಗಿನಂತೆ ಅಶಾಶ್ವತ ಎಂದು ತಂದೆ ತಾಯಿಗಳಿಗೆ ಉಪದೇಶವನ್ನು ಮಾಡುತ್ತಾನೆ.

ಪ್ರಾಣಪ್ರಿಯ ಕಾವ್ಯದಲ್ಲಿ ವಿವಾಹವಿಧಿಗಳು ಆರಂಭವಾಗಿದ್ದ ಸೂಚನೆ ಇಲ್ಲ. 'ಪ್ರಾಣಪ್ರಿಯ ಕಾವ್ಯ'ದಲ್ಲಿ ಪರಿನಿಷ್ಕ್ರಮಣವನ್ನು ಹೊಂದಿದ ನೇಮಿಯನ್ನು ಸಂಸಾರಕ್ಕೆ ಮತ್ತೆ ಎಳೆಯಲು ರಾಜೀಮತಿಯು ಪ್ರಯತ್ನಿಸುತ್ತಾಳೆ. ಉಳಿದ ಕಾವ್ಯಗಳಲ್ಲಿ ತಂದೆ ತಾಯಿಯರು ಪ್ರಯತ್ನಿಸುತ್ತಾರೆ. ರಾಜೀಮತಿಯ ಸಖಿಯರೂ ಸಹ ನೇಮಿನಾಥನಲ್ಲಿ ಪ್ರಾರ್ಥಿಸುತ್ತಾರೆ.

ನೇಮಿನಾಥನೇ, ಬಹು ರೂಪವತಿಯಾದ ಈ ಮದನಾಂಗಿಯನ್ನು ನೋಡು. ಬಯಕೆಗಳನ್ನುಂಟು ಮಾಡುವಂತಹ ಯೌವನಾಂಗಿಯನ್ನು ದೂರಮಾಡಿ ವೃದ್ಧರಿಗೆ ಅರ್ಹವಾದ ನೇಮ ತಪಸ್ಸುಗಳನ್ನು ಯೌವನ ಕಾಲದಲ್ಲಿ ಅಪೇಕ್ಷಿಸುವ ಜಡ ಭಾವದ ಕಾಮಹೀನರು

ಯಾರಿರುತ್ತಾರೆ? ಮರಿಜಿಂಕೆಯ ಕಣ್ಣುಗಳಂತಹ ಕಣ್ಣುಳ್ಳ ಈ ಸುಂದರಿ ಬಾಲೆಯನ್ನು ಬೇಗನೆ ವರಿಸು.

ನವಯೌವನದಲ್ಲಿ ವಿಯೋಗ ಸಮುದ್ರವನ್ನು (ಒಂಟಿಯಾಗಿ) ನೇಮದಿಂದ "ಭುಜದಿಂದಲೀಸುತ" ದಾಟಲು ಯಾರಿಗೆ ಸಾಧ್ಯ ಎಂದು ಬೇಡುತ್ತಾರೆ. ಇಲ್ಲಿ ವಿಯೋಗದ ದುಃಖವು ಸಮುದ್ರವಾದರೆ ಕರ್ಣಪಾರ್ಯನಲ್ಲಿ 'ಸಂಸಾರವೆಂಬುದು ಪಾಪದ ಕಡಲು' ಅದನ್ನು 'ಈಸುವವರು ಯಾರು?' ಎಂದು ನೇಮಿನಾಥನು ಹೇಳುತ್ತಾನೆ.

ಸಖಿಯರ ಮಾತಿಗೆ ಚಲಿಸದ ರಾಜಕುಮಾರನನ್ನು ಕಂಡು ಮದುವಣಗಿತ್ತಿಯಾದ ರಾಜೀಮತಿಯೇ ಬಂದು ತನ್ನ ಕುಲ, ಸೌಂದರ್ಯ, ರಾಜ್ಯದ ಅಧಿಕಾರ, ಯೌವನ ಕಾಲದ ಆಮೋದ – ಪ್ರಮೋದಗಳ ಬಗೆಗೆ ಹೇಳಿ, ಶೃಂಗಾರ ಭರಿತವಾದ ಮಾತುಗಳಿಂದ ರಾಜಕುಮಾರನನ್ನು ಆಕರ್ಷಿಸಲು ಪ್ರಯತ್ನಪಟ್ಟು ಸೋಲುತ್ತಾಳೆ. ವಿಯೋಗದಿಂದ ಬಹಳವಾಗಿ ದುಃಖ ಪಡುವ ರಾಜಕುಮಾರಿಗೆ – ಉಳಿದ ನೇಮಿನಾಥ ಪುರಾಣಗಳಲ್ಲಿ ತಂದೆ ತಾಯಿಗಳಿಗೆ ಉಪದೇಶ ಮಾಡುವಂತೆ – ಶಾಶ್ವತ ಸುಖವಾದ ಮುಕ್ತಿಯನ್ನು ಪಡೆಯುವ ಬಗೆಯನ್ನೂ ಸಂಸಾರದ ಅಶಾಶ್ವತೆಯ ಬಗೆಯನ್ನು ಈ ರೀತಿ ತಿಳಿಸುತ್ತಾನೆ: 'ಬಂಧು ಮಿತ್ರರನ್ನು ಬಂಧನವೆಂದು ತಿಳಿ, ವಿಷಯಾಶೆಯನ್ನು ವಿಷವೆಂದೂ, ಅರ್ಥವನ್ನು ಅನರ್ಥವೆಂದೂ ಭಾವಿಸು. ಇಂದಿನಿಂದ ಈ ವೈಭವಗಳನ್ನೆಲ್ಲ ಬಿಟ್ಟು ಸದ್ಧರ್ಮವನ್ನು ಆಚರಿಸು. ಇದರಿಂದ ಪುರುಷೋತ್ತಮನೂ ಸಹ ನಿನ್ನನ್ನು ಗೌರವಿಸುವನು. ಧರ್ಮಕ್ಕೆ, ಶರಣಾದವರಿಗೆ, ಶುದ್ಧ ಜ್ಞಾನವುಂಟಾಗಿ, ದೇಹವು 'ಹಂಸ ಕಾಂತಿ'ಯನ್ನು ಹೊಂದುವುದು. ಯಾರು ಧರ್ಮವನ್ನು ಆಚರಿಸುವರೋ ಅವರು ಮನ್ಮಥನಿಗೆ ಸಮಾನವಾದ ರೂಪವನ್ನೂ, ದೇವೇಂದ್ರರ ಐಶ್ವರ್ಯಕ್ಕೆ ಸಮವಾದ ಐಶ್ವರ್ಯವನ್ನೂ ಹೊಂದುವನು. ಆದಕಾರಣ ಧರ್ಮವನ್ನು ಪರಿಪಾಲಿಸು ಎಂದು ರಾಜೀಮತಿಗೆ ಉಪದೇಶಿಸುವನು'.

ಎಲ್ಲ ನೇಮಿ ಕಾವ್ಯಗಳಲ್ಲಿಯೂ ರಾಜೀಮತಿಯು ನೇಮಿನಾಥನ ಪರಿನಿಷ್ಕ್ರಮಣದ ನಂತರ ಐನೂರು ಜನ ರಾಜಕುಮಾರಿಯರ ಜೊತೆ ದೀಕ್ಷೆಯನ್ನು ಪಡೆದರೆ 'ಪ್ರಾಣಪ್ರಿಯ ಕಾವ್ಯ'ದಲ್ಲಿ ದೀರ್ಘಸಂವಾದದ ನಂತರ – ನೇಮಿನಾಥನ ಉಪದೇಶದ ನಂತರ – ರಾಜೀಮತಿಯೊಬ್ಬಳೇ ದೀಕ್ಷೆ ಪಡೆಯುತ್ತಾಳೆ. ಈ ಪ್ರಸಂಗವನ್ನು ಮಹಾಪುರಾಣದಲ್ಲಿ ಸುಂದರವಾದ ಉಪಮೆಯೊಡನೆ ಹೀಗೆ ಹೇಳಿದ್ದಾರೆ.

ಸಂಧ್ಯೇವ ಭಾನುಮಸ್ತಾದ್ರಾವನು ರಾಜಮತಿಶ್ಚ ತಮ್
ಯಯೌ ವಾಚಾಪಿ ದತ್ತಾನಾಂ ನ್ಯಾಯೋಯಂ ಕುಲಯೋಷಿತಾಮ್

ಸಾಯಂಸಂಧ್ಯೆಯು ಅಸ್ತಾಚಲದಲ್ಲಿ ಸೂರ್ಯನ್ನು ಹಿಂಬಾಲಿಸಿ ಹೋಗುವಂತೆ ಕುಲಯೋಷಿತೆಯಾದ ರಾಜೀಮತಿಯೂ ಆ ನೇಮಿಸ್ವಾಮಿಯನ್ನು ಹಿಂಬಾಲಿಸಿ ದೀಕ್ಷೆಯನ್ನು ಪಡೆದಳು.

## ಭಕ್ತಾಮರ ಸ್ತೋತ್ರ ಮತ್ತು ಮೂಲ ಪ್ರಾಣಪ್ರಿಯ ಕಾವ್ಯ ಮತ್ತು ಅನುವಾದ ಕಾವ್ಯದ ತೌಲನಿಕ ನೋಟ

ಮಾನತುಂಗಾಚಾರ್ಯರ 'ಭಕ್ತಾಮರ ಸ್ತೋತ್ರ'ವು ಅಮರ ಭಕ್ತನೂ ವೀತರಾಗನೂ ಆದ ಆದಿನಾಥನನ್ನು ಕುರಿತ ಭಕ್ತಿಪರವಾದ ಕಾವ್ಯ. ಈ ಕಾವ್ಯದಲ್ಲಿ ಮಾನತುಂಗಾಚಾರ್ಯರು ಸಂಸಾರ ಸಾಗರದಲ್ಲಿ ಮುಳುಗೇಳುತ್ತಿರುವ ಜಗತ್ತಿನ ಜನರನ್ನು ಪಾರುಮಾಡು ಎಂದು ಪ್ರಾರ್ಥಿಸುತ್ತಾರೆ. ಈ ಕಾವ್ಯದ ಪ್ರತಿ ಪದ್ಯದ ನಾಲ್ಕನೇ ಪಾದವನ್ನು ತಮ್ಮ ಕಾವ್ಯದ ನಾಲ್ಕನೇ ಪಾದವನ್ನಾಗಿ ಮಾಡಿಕೊಂಡು ಸಮಸ್ಯಾಪೂರ್ಣ ಕಾವ್ಯವನ್ನು ರಚಿಸಿರುವ ರತ್ನಸಿಂಹ ಮುನಿಗಳ ಶೃಂಗಾರವೇ ಪ್ರಧಾನವಾದ 'ಪ್ರಾಣಪ್ರಿಯ' ಕಾವ್ಯ ಮತ್ತು ಅದರ ಕನ್ನಡಾನುವಾದ ಕಾವ್ಯದಲ್ಲಿ "ರಾಜೀಮತಿಯು ವಿಯೋಗವೆಂಬ ದುಃಖಸಾಗರದಿಂದ ತನ್ನನ್ನು ಪಾರುಮಾಡು" ಎಂದು ಪ್ರಾರ್ಥಿಸುತ್ತಾಳೆ. 'ಪ್ರಾಣಪ್ರಿಯ ಕಾವ್ಯ'ಕ್ಕೆ ಆಧಾರವಾದ ಭಕ್ತಾಮರ ಸ್ತೋತ್ರದ – ವೈರಾಗ್ಯ ಕಾವ್ಯದ – ಪಾದವು ಶೃಂಗಾರ ಕಾವ್ಯದಲ್ಲಿ ಹೇಗೆ ಧ್ವನಿಸುತ್ತದೆ ಎಂಬುದನ್ನು ಹೀಗೆ ಗುರುತಿಸಬಹುದು:

ಇದು ಭಕ್ತಾಮರ ಸ್ತೋತ್ರದ ಮೊದಲ ಪದ್ಯದ ಕೊನೆಯ ಪಾದದಲ್ಲಿ ದೇವತೆಗಳಿಂದ ವಂದ್ಯನೂ ಪಾಪರೂಪದ ಅಂಧಕಾರ ಸಮೂಹವನ್ನು ನಾಶ ಮಾಡುವಂತಹವನೂ, ಸಂಸಾರ ಸಾಗರದಲ್ಲಿ ಮುಳುಗೇಳುತ್ತಿರುವ ಜನರು ಸಂಸಾರ ಬಂಧನಗಳಿಂದ ಮುಕ್ತರನ್ನಾಗಿಸಲು ಅವತರಿಸಿದವನೂ ಆದ ಪ್ರಥಮ ಜಿನೇಂದ್ರನಿಗೆ ನಮಸ್ಕರಿಸುತ್ತೇನೆ ಎಂದು ಮಾನತುಂಗಾಚಾರ್ಯರು ಹೇಳಿದ್ದರೆ, 'ಪ್ರಾಣಪ್ರಿಯ'ಕಾವ್ಯದಲ್ಲಿ ರಾಜೀಮತಿಯ ದುಃಖವನ್ನು ಮನಗಂಡ ಅವಳ ಸಖಿಯರು ಚಕೋರದಂತಹ ಕಾಂತಿಯುತವಾದ ಕಣ್ಣುಗಳುಳ್ಳ ನಿನ್ನನ್ನು ಸೇರೆಂದು ನೇಮಿನಾಥನನ್ನು ನಾವು ಬೇಡುತ್ತೇವೆ ಎಂದು ಹೇಳುತ್ತಾರೆ. ಭಕ್ತಾಮರ ಸ್ತೋತ್ರದಲ್ಲಿ ಭವಸಾಗರದಿಂದ ಪಾರುಮಾಡಲು ಆದಿನಾಥನನ್ನು ಬೇಡಿಕೊಂಡರೆ, 'ಪ್ರಾಣಪ್ರಿಯ'ಕಾವ್ಯದಲ್ಲಿ ವಿಯೋಗ ದುಃಖ ಸಾಗರದಿಂದ ಪಾರುಮಾಡಲು ಬೇಡಿಕೆಯಿದೆ.

ಇದೇ ಪಾದಕ್ಕೆ 'ಪ್ರಾಣಪ್ರಿಯ'ಕಾವ್ಯದಲ್ಲಿ ರೈವತಾದ್ರಿಯಲ್ಲಿ ತಪೋನಿರತನಾಗಿದ್ದ ನೇಮಿಜಿನೇಶನನ್ನು ಪವಿತ್ರಾತ್ಮಳಾದ ರಾಜೀಮತಿದೇವಿಯು ತನ್ನ ವಿಯೋಗ ದುಃಖಸಾಗರವನ್ನು ದಾಟಲು 'ಆಲಂಬನೆಯನ್ನು' ಬೇಡುತ್ತಾ ದೀನಳಾಗಿ ನಿಂತಿರುತ್ತಾಳೆ. ಭಕ್ತಾಮರ ಸೋತ್ರದಲ್ಲಿ ಭಕ್ತರು ಸಂಸಾರಸಾಗರ ಬಂಧನದಿಂದ ಮುಕ್ತಿ ಬೇಡಿದರೆ ರತ್ನಸಿಂಹರ 'ಪ್ರಾಣಪ್ರಿಯ' ಕಾವ್ಯದಲ್ಲೂ ಶರ್ಮರ ಅನುವಾದದಲ್ಲೂ ವಿಯೋಗ ಸಾಗರದಿಂದ ಪಾರುಮಾಡಲು ರಾಜೀಮತಿ ಬೇಡುತ್ತಾಳೆ.

ಸಮಸ್ತ ಶಾಸ್ತ್ರಗಳ ತತ್ವಜ್ಞಾನದಿಂದ ಪ್ರಾಪ್ತವಾದ ಬುದ್ಧಿ ಕೌಶಲ್ಯದಿಂದ ಮೂರು ಲೋಕಗಳೂ ಆಕರ್ಷಿತವಾಗುವಂತಹ ಗಂಭೀರ ಆಶಯಗಳುಳ್ಳ ಸ್ತೋತ್ರಗಳಿಂದ ದೇವೇಂದ್ರನು ಸ್ತುತಿಮಾಡಿದ ಪ್ರಥಮ ಜಿನೇಂದ್ರನನ್ನು ನಾನು ಕೂಡ ಸ್ತುತಿ ಮಾಡುವೆ ಎಂದು ಭಕ್ತಾಮರ ಸ್ತೋತ್ರದಲ್ಲಿ ಹೇಳಿದ್ದರೆ 'ಪ್ರಾಣಪ್ರಿಯ ಕಾವ್ಯ'ದಲ್ಲಿ ರಾಜೀಮತಿಯ ದುಃಖವನ್ನು ಮನಗಂಡ ಅವಳ ಸಖಿಯರು ಚಕೋರದಂತಹ ಕಾಂತಿಯುತವಾದ ಕಣ್ಣುಳ್ಳ ನಿನ್ನನ್ನು ಸೇರೆಂದು ನೇಮಿನಾಥನನ್ನು ನಾವು ಬೇಡುತ್ತೇವೆಂದು ಹೇಳುತ್ತಾರೆ.

ಭಕ್ತಾಮರ ಸ್ತೋತ್ರದಲ್ಲಿ ಅಜ್ಞಾನಿಯಾದ ಬಾಲಕನಲ್ಲದೆ ತಿಳುವಳಿಕೆಯಿರುವ ಯಾರೂ ನೀರಿನಲ್ಲಿ ಕಾಣುವ ಚಂದ್ರಬಿಂಬವನ್ನು ಹಿಡಿಯಲು ಯತ್ನಿಸುವುದಿಲ್ಲ. ದೇವತೆಗಳಿಂದ ಸ್ತೋತ್ರಮಾಡಲ್ಪಡುವ ನಿನ್ನನ್ನು ಸ್ತುತಿಮಾಡಲು ಪ್ರಯತ್ನಿಸಿದ್ದು ನನ್ನ ಧಾರ್ಷ್ಟ್ಯವೇಸರಿ. ತಿಳುವಳಿಕೆಯುಳ್ಳವರು ಚಂದ್ರಬಿಂಬವನ್ನು ಹಿಡಿಯಲು ಅಪೇಕ್ಷಿಸುವುದಿಲ್ಲ.

ಇದೇ ಮಾತನ್ನು ರಾಜೀಮತಿಯ ಸಖಿಯರು ನೇಮಿನಾಥನಿಗೆ ಹೀಗೆ ಹೇಳುತ್ತಾರೆ. ನೇಮಿನಾಥನೇ, ಬಯಕೆಗಳನ್ನು ಉದ್ದೀಪ್ತಗೊಳಿಸುವಂತಹ ರೂಪ ಯೌವನಗಳಿಂದ ಕೂಡಿದ ಇವಳನ್ನು ದೂರ ಮಾಡಬೇಡ. ಯೌವನ ಕಾಲದಲ್ಲಿ ವೃದ್ಧರಿಗೆ ಉಚಿತವಾದ ನೇಮಿತಪಸ್ಸುಗಳನ್ನು ಆಚರಿಸುತ್ತಾ ಜಡಭಾವವನ್ನು ತೋರುವಂತಹ ಕಾಮ ವಿಹೀನರು ಯಾರಿದ್ದಾರೆ ಎಂದು ಕೇಳುತ್ತಾರೆ. ಯಾರು ಯೌವನ ಕಾಲದಲ್ಲಿ ಕಠಿಣವಾದ ತಪಸ್ಸನ್ನು ಇಚ್ಛಿಸುತ್ತಾರೆ ಎಂದು ಹೇಳುವಾಗ ಮನಃ ಕ ಇಚ್ಛತಿ ಜನಃ ಸಹಸಾಗ್ರಹೀತುಂ ಎಂದು ಹೇಳಿದ್ದಾರೆ. ಇಲ್ಲಿ ರತ್ನಸಿಂಹ ಮುನಿಗಳ ಮೂಲ ಪದ್ಯದಂತೆಯೇ ಕನ್ನಡಾನುವಾದವೂ ಇದೆ.

ಓ ಗುಣಸಾಗರನೇ, ಬೃಹಸ್ಪತಿಯಂಥ ಬುದ್ಧಿವಂತನೂ ಚಂದ್ರಕಾಂತಿಯ ಸಮಾನವಾದ ನಿಮ್ಮ ಗುಣಗಳನ್ನು ಸ್ತುತಿಸಲಾರ. ಪ್ರಳಯಕಾಲದ ಪ್ರಚಂಡತೆಯಿಂದಲೂ ಬಿರುಗಾಳಿಯ

ಹೊಡೆತದಿಂದಲೂ ಏಳುತ್ತಿರುವ ಪರ್ವತಪ್ರಾಯವಾದ ಅಲೆಗಳಿಂದಲೂ ಕ್ರೂರವಾದ ಮೊಸಳೆಗಳು ಬಾಯ್ದೆರೆದುಕೊಂಡಿರುವಂತಹ ಸಮುದ್ರವನ್ನು ಎರಡೂ ತೋಳುಗಳಿಂದ ಈಜಲು ಯಾರಿಗೆ ಸಾಧ್ಯ ಎಂಬ ಅರ್ಥದಲ್ಲಿ 'ಕೋ ವಾ ತರೀತುಮಲ ಮಂಬುನಿಧಿಂ ಭುಜಾಭ್ಯಾಮ್' ಎಂದು ಹೇಳಿದ್ದಾರೆ.

ಮೊಸಳೆಗಳಿಂದ ಕೂಡಿದ ಸಾಗರ ಎಂದರೆ ಇಲ್ಲಿ ಸಂಸಾರ ಸಾಗರ ಎಂದರ್ಥ ವಾಗುತ್ತದೆ. ಇದನ್ನು ಆದಿನಾಥನ ಸಹಾಯವಿಲ್ಲದೆ ದಾಟಲು ಯಾರಿಗೂ ಸಾಧ್ಯವಿಲ್ಲ ಎಂದು ಅರ್ಥಮಾಡಿದ್ದಾರೆ. ಇದೇ ಮಾತನ್ನು ಪದ್ಮನಾಭರ ಅನುವಾದದಲ್ಲಿ ರಾಜೀಮತಿಯ ಸಖಿಯರು ನೇಮಿನಾಥನನ್ನು ಪ್ರಾರ್ಥಿಸುತ್ತಾ ಹೀಗೆ ಹೇಳುತ್ತಾರೆ: 'ಸ್ವಾಮಿಯೇ ಮರಿಜಿಂಕೆಯ ಕಣ್ಣುಗಳ ಸುಂದರಳಾದ ಈ ಬಾಲೆಯನ್ನು ತಡಮಾಡದೆ ಬಂದು ಪ್ರೇಮದಿಂ ವರಿಸಯ್ಯ. ಈ ಪ್ರಪಂಚದಲ್ಲಿ ನವಯೌವನ ಕಾಲದಲ್ಲಿ ವಿಯೋಗ' ಸಮುದ್ರವನ್ನು ನೇಮ ತಪಸ್ಸುಗಳನ್ನು ಆಚರಿಸುತ್ತಾ ದಾಟಲು ಯಾರಿಗೆ ಸಾಧ್ಯ' ಎಂದು ಹೇಳುತ್ತಾರೆ.

ಪ್ರಾಣಿಗಳು ಎಂತಹ ಸಂದರ್ಭದಲ್ಲಿಯೂ ತಮ್ಮ ಸಂತಾನವನ್ನು ರಕ್ಷಿಸಲು ಪ್ರಯತ್ನಿಸುವುವು. ಅತ್ಯಂತ ಮೃದು ಸ್ವಭಾವದ ಜಿಂಕೆಯೂ ಸಹ ತನ್ನ ಮರಿಯ ಮೇಲಿನ ಪ್ರೀತಿಯಿಂದ ಅದನ್ನು ರಕ್ಷಿಸಲು ತನ್ನ ಸಾಮರ್ಥ್ಯದ ಬಗೆಗೆ ಆಲೋಚಿಸದೆ ಸಿಂಹವನ್ನೇ ಎದುರಿಸಲು ಸಿದ್ಧವಾಗುತ್ತದೆ. ಹಾಗೆಯೇ ಭಕ್ತಿವಶದಿಂದ 'ನನ್ನ ಸಾಮರ್ಥ್ಯದ ಬಗೆಗೆ ಆಲೋಚಿಸದೆಯೇ ನಿಮ್ಮನ್ನು ಸ್ತುತಿಸುವ ಪ್ರಯತ್ನ ಮಾಡಿದೆ' ಎಂದು ಆದಿನಾಥನನ್ನು ಪ್ರಾರ್ಥಿಸುವಾಗ ಹೇಳುತ್ತಾರೆ.

ಪ್ರಾಣಪ್ರಿಯ ಕಾವ್ಯದಲ್ಲಿ ನೇಮಿಕುಮಾರನನ್ನು ರಾಜೀಮತಿಯ ಸಖಿಯರು ಎಷ್ಟು ಬೇಡಿಕೊಂಡರೂ ಅವನು ಚಲಿಸದಿದ್ದಾಗ ಅವರು ಉಗ್ರಸೇನ ಮಹಾರಾಜನ ಬಲದೆದುರು ಬದಲಾಗಬಹುದೆಂದು ಯೋಚಿಸಿ "ತಮ್ಮ ಕನ್ಯೆಯ ರಕ್ಷಣೋದ್ಯಮ ಗೈವುದು ಸಹಜಂ ವಲಂ" – ತಮ್ಮ ಮಗಳ (ರಕ್ಷಣೆಯನ್ನು ಮಾಡುವುದು) ಯೋಗಕ್ಷೇಮವನ್ನು ನೋಡಿಕೊಳ್ಳುವುದು ತಂದೆತಾಯಿಗಳ ಹೊಣೆ. ಆದ್ದರಿಂದ ನೀನು ತಪಸ್ಸಿನಲ್ಲೇ ತೊಡಗುವುದಾದರೆ ಉಗ್ರಸೇನ ಮಹಾರಾಜನು ಬಂದು ನಿನ್ನ ಪ್ರಯತ್ನಕ್ಕೆ ತಡೆಯುಂಟು ಮಾಡುವನು ಎಂದು ಹೇಳಲು ಮೇಲಿನ ವಾಕ್ಯವನ್ನು ಉಪಯೋಗಿಸಿಕೊಂಡಿದ್ದಾರೆ. ಬುದ್ಧಿಯಿಲ್ಲದ ಸಿಂಹಕ್ಕಿಂತಲೂ ದುರ್ಬಲವಾದ ಮೃದುಸ್ವಭಾವದ ಜಿಂಕೆಯೇ ತನ್ನ ಮಗುವಿನ

ಮೇಲಿನ ಪ್ರೀತಿಯಿಂದ ಸಿಂಹವನ್ನು ಎದುರಿಸುವುದಾದರೆ ರಾಜನು ತನ್ನ ಮಗಳನ್ನು ರಕ್ಷಿಸಲು ಪ್ರಯತ್ನಿಸುವುದಿಲ್ಲವೇ ಎಂಬ ಭಾವನೆ ಸಖಿಯರದು. ಆದರೆ ವೈರಾಗ್ಯ ಬಲದೆದುರು ರಾಜನೂ ಸೋಲುತ್ತಾನೆ ಎಂಬುದು ಸಖಿಯರಿಗೆ ತಿಳಿಯದ ವಿಷಯ.

ಶ್ರೀ ಮಾನತುಂಗಾಚಾರ್ಯರು ಮಹಾವೀರನನ್ನು ಪ್ರಾರ್ಥಿಸುತ್ತಾ ಹೀಗೆ ಹೇಳುತ್ತಾರೆ: "ಸ್ವಾಮಿಯೇ ನಾನು ಹೆಚ್ಚು ಅಭ್ಯಾಸಮಾಡದ ಅಲ್ಪಜ್ಞಾನಿ. ವಿಶೇಷವಾಗಿ ಶಾಸ್ತ್ರಗಳನ್ನು ತಿಳಿದವನಲ್ಲ. ನಾನು ನಿನ್ನನ್ನು ಸ್ತುತಿಸಲು ಪ್ರಯತ್ನಿಸಿದರೆ ವಿದ್ವಾಂಸರ ಪರಿಹಾಸಕ್ಕೆ ಗುರಿಯಾಗುತ್ತೇನೆ. ಆದರೆ ವಸಂತ ಋತುವಿನ ಮಾವಿನ ಚಿಗುರು ಕೋಗಿಲೆಗೆ ಮಧುರವಾಗಿ ಹಾಡಲು ಹೇಗೆ ಕಾರಣವಾಗುತ್ತದೆಯೋ ಹಾಗೆ ನಿಮ್ಮ ಮೇಲಿನ ಭಕ್ತಿಯೇ ಸ್ತುತಿಮಾಡಲು ನನ್ನನ್ನು ಪ್ರೇರೇಪಿಸುತ್ತದೆ."

ಸಖಿಯರ ಮಾತಿನಿಂದ ವಿಚಲಿತನಾಗದ ನೇಮಿನಾಥನನ್ನು ಕುರಿತು ರಾಜೀಮತಿಯು ಹೀಗೆ ಹೇಳುತ್ತಾಳೆ: "ಸುಂದರನೂ, ರತಿಕೇಳಿ ಕೌಶಲವಲ್ಲಭನೂ ಸತೀಭೂಷಣನೆಂದು ರಸತಜ್ಞರು ಹೇಳಿದ್ದಾರೆ – ಯೌವನ ಕಾಲದಲ್ಲಿ – ವಸಂತಮಾಸದ ಮಾವಿನ ಹೊಸ ಚಿಗುರು, ಹೂಗಳು ಸಹ ಸುಂದರಳಾದ ಸತಿಗೆ ಆಭೂಷಣಗಳಾಗುತ್ತವೆ" ಎಂದು ಸುಂದರವಾಗಿ ಅನುವಾದಿಸಿದ್ದಾರೆ.

ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನನ್ನು ಕಾಯಾವಾಚಾ ಮನಸಾ ಸ್ಮರಿಸುವ ಪ್ರಾಣಿಗಳ ಪಾಪವು ಹೇಗೆ ನಾಶವಾಗುತ್ತದೆ ಎಂಬುದನ್ನು ಹೇಳುವಾಗ ಈ ಮಾತನ್ನು ಹೇಳಿದ್ದಾರೆ. "ರಾತ್ರಿಯಲ್ಲಿ ಲೋಕವನ್ನು ಮುಚ್ಚುವ ಗಾಢಾಂಧಕಾರವು ಸೂರ್ಯನ ಕಿರಣವು ಉದಯಿಸಿದ ಮಾತ್ರದಿಂದಲೇ ಹೇಗೆ ದೂರವಾಗುವುದೋ ಹಾಗೆ ಆದಿನಾಥನನ್ನು ಜ್ಞಾನ ಭಕ್ತಿ ಪೂರ್ವಕವಾಗಿ ಸ್ತುತಿಸಲು ಸರ್ವಮಹಾಪಾಪಗಳೂ ತೊಲಗಿಹೋಗುವುವು."

ಇದೇ ಮಾತನ್ನು ರಾಜೀಮತಿಯು ನೇಮಿನಾಥನನ್ನು ಕುರಿತು ಹೇಳುತ್ತಾಳೆ: 'ಮಿತ್ರನೇ ನಿನ್ನ ಗಾಢವಾದ ಬಾಹು ಬಂಧನದಿಂದಲೂ, ಮಕರಿಕಾಪತ್ರ ಚಿತ್ರಗಳಿಂದ ಅಲಂಕೃತವಾದ ಆನನಗಳು ಸೇರುವ ಚುಂಬನದಿಂದ ನನ್ನ ವಿಚಿತ್ರ ಸಂಕಟವೂ, ತಾಪವೂ, ಸೂರ್ಯನ ಕಿರಣಗಳಿಂದ ಅಂಧಕಾರವು ನಾಶವಾಗುವಂತೆ ನೀಗಿ ಹೋಗುವುದು.'

ಮಾನತುಂಗಾಚಾರ್ಯರು ಸೂರ್ಯನ ಕಿರಣಗಳ ಉದಯವನ್ನು ಅಜ್ಞಾನವನ್ನು ದೂರಮಾಡಿ ಸಕಲ ಕರ್ಮ ನಾಶಕ್ಕೆ ಕಾರಣವೆಂದು ಹೇಳುತ್ತಾರೆ. ರತ್ನಸಿಂಹ ಮುನಿಗಳು ಅದನ್ನು ವಿಯೋಗ ದುಃಖವು ಹೇಗೆ ದೂರವಾಗುತ್ತದೆ – ಸಂಸಾರ ಬಂಧನಕ್ಕೆ ಕಾರಣವಾಗುವ – ಎಂಬುದನ್ನು ಹೇಳಲು ಈ ವಾಕ್ಯವನ್ನು ಬಳಸಿದ್ದಾರೆ. ಪದ್ಮನಾಭ ಶರ್ಮರ ಅನುವಾದಿತ ಪದ್ಯವೂ ಮೂಲಕ್ಕೆ ಹತ್ತಿರವಾಗಿಯೇ ಇದೆ.

ವೃಷಭದೇವನು ಕೇವಲ ಜ್ಞಾನವನ್ನು ಪಡೆದುದರಿಂದ ಉಂಟಾದ ಕಾಂತಿಯನ್ನು ಅನ್ಯದೇವತೆಗಳಾದ ಹರಿಹರ–ಬ್ರಹ್ಮಾದಿಗಳ ಕಾಂತಿಗಿಂತಲೂ ವಿಶಿಷ್ಟವಾದುದು ಎಂದು ಹೇಳುತ್ತಾನೆ. ಆದಿನಾಥನ ಕಾಂತಿಯನ್ನು ವಜ್ರದ ಕಾಂತಿಗೂ ಹರಿಹರ–ಬ್ರಹ್ಮಾದಿಗಳ ಕಾಂತಿಯನ್ನು ಗಾಜಿನ ಚೂರಿಗೂ ಹೋಲಿಸುತ್ತಾರೆ. ಗಾಜು–ವಜ್ರ ಎರಡೂ ಕಾಂತಿಯುಳ್ಳ ವಸ್ತುಗಳೇ ಆಗಿದ್ದರೂ ವಜ್ರದ ಕಾಂತಿ ಗಾಜಿಗೆ ದೊರೆಯುವುದಿಲ್ಲ. ವಜ್ರಕ್ಕೆ ದೊರೆಯುವ ಬೆಲೆ ಗಾಜಿಗೆ ದೊರೆಯುವುದಿಲ್ಲ. ಎಂದರೆ ಹರಿಹರ–ಬ್ರಹ್ಮಾದಿ ದೇವತೆಗಳಗಿಂತಲೂ ವೃಷಭ ದೇವನು ಶ್ರೇಷ್ಠನು ಎಂದು ಹೇಳಲು ವಜ್ರ–ಗಾಜುಗಳ ಸಾದೃಶ್ಯವನ್ನು ಭಕ್ತಾಮರ ಸ್ತೋತ್ರದಲ್ಲಿ ಮಾನತುಂಗಾಚಾರ್ಯರು ನೀಡಿದ್ದಾರೆ.

ರತ್ನಸಿಂಹ ಮುನಿಗಳೂ ಸಹ ತಮ್ಮ ಪ್ರಾಣಪ್ರಿಯ ಕಾವ್ಯದಲ್ಲಿ ನೇಮಿನಾಥನ ರೂಪ, ಗುಣೌನ್ನತ್ಯಗಳನ್ನು ಹೇಳುವಾಗ ವಜ್ರ ಹಾಗೂ ಗಾಜಿನ ಉಪಮಾನವನ್ನೇ ನೀಡಿದ್ದಾರೆ. ರಾಜೀಮತಿಯು ನೇಮಿನಾಥನ ಗುಣ ರೂಪಗಳ ಬಗೆಗೆ ಹೇಳುತ್ತಾ "ವಜ್ರದಷ್ಟು ಉನ್ನತವಾದದ್ದನ್ನು ಬಯಸುವವನಾರೂ ಗಾಜಿನ ಚೂರಿಗೆ ತೃಪ್ತನಾಗಲಾರ. ಉನ್ನತ ರೂಪಗುಣಗಳಿಂದ ಹಾಗೂ ಅನುಪಮವಾದ ಸೌಂದರ್ಯವನ್ನು ಹೊಂದಿರುವ ನಿನ್ನನ್ನು ಒಂದು ಬಾರಿ ನೋಡಿದ ಯಾವ ಸ್ತ್ರೀಯರೂ ಅನ್ಯರೊಡನೆ ಸಮಾಗಮವನ್ನು ಅಪೇಕ್ಷಿಸುವುದಿಲ್ಲ." ಆದ್ದರಿಂದ ನೀನು ಬೇಗನೆ ಬಂದು ನನ್ನನ್ನು ಸೇರು ಎಂದು ಪ್ರಾರ್ಥಿಸುತ್ತಾಳೆ.

ಜಿನ ಭಕ್ತರಾದ ಮಾನತುಂಗಾಚಾರ್ಯರು ಆದಿನಾಥನ ದರ್ಶನವು ಅನ್ಯ ದೇವರುಗಳಾದ ಹರಿಹರಾದಿಗಳ ದರ್ಶನಕ್ಕಿಂತ ಹೇಗೆ ಶ್ರೇಷ್ಠವೆಂದು ಹೇಳುವಾಗ ಆದಿನಾಥನ ದರ್ಶನದ ನಂತರ ಅನ್ಯಭವಾಂತರಗಳಲ್ಲಿಯೂ ಅನ್ಯ ದೇವರುಗಳು ನಮ್ಮನ್ನು ಆಕರ್ಷಿಸುವುದಿಲ್ಲ ಎಂದು ಹೇಳಿದ್ದಾರೆ. ಇದನ್ನು ನಿಂದಾಸ್ತುತಿಯ ರೀತಿಯಲ್ಲಿ ಹೇಳಿದ್ದಾರೆ.

ಜಿನ ದರ್ಶನಕ್ಕಿಂತ ಮೊದಲು ಹರಿಹರಾದಿ ದೇವತೆಗಳ ದರ್ಶನ ಮಾಡಿದ್ದೇ ಶ್ರೇಷ್ಠ. ಏಕೆಂದರೆ ಆ ದೇವರುಗಳು ರಾಗ ದ್ವೇಷ ಕ್ರೋಧಗಳೆಂಬ ಕಷಾಯಗಳನ್ನು ಸೂಚಿಸುವ ಶಸ್ತ್ರಗಳನ್ನು ಧರಿಸಿದ್ದಾರೆ. ಇವರ ದರ್ಶನದ ನಂತರ ಕೇವಲ ಜ್ಞಾನಿಯೂ, ದಯಾಪರನೂ ಆದ ಆದಿನಾಥನನ್ನು ನೋಡಿದರೆ ಅಮೃತದ ಕಡಲಿನಲ್ಲಿ ಮುಳುಗಿದಂತೆ ಆನಂದವುಂಟಾಗುತ್ತದೆ. ನಿಮ್ಮ ದರ್ಶನ ಪಡೆದವರ ಮನಸ್ಸನ್ನು ಅನ್ಯದೇವರುಗಳು ಭವಾಂತರದಲ್ಲಿಯೂ ಆಕರ್ಷಿಸಲಾರವು ಎಂದು ಅರ್ಥವಾಗುತ್ತದೆ.

ಈ ಮಾತನ್ನು ರಾಜೀಮತಿಯು ನೇಮಿನಾಥನಿಗೆ ಹೀಗೆ ಹೇಳುತ್ತಾಳೆ: "ಪ್ರಾಣವಲ್ಲಭ! ಕಾಮರೂಪದ ನೀನೇ ನನ್ನ ಜನ್ಮಜನ್ಮಗಳಲ್ಲಿಯೂ ಪ್ರಾಣ ಸತ್ಪ್ರಿಯನಾಗಿರುವೆ. ಜಾಣತನದಿಂದ ಇಂದ್ರನಾಗಲಿ ಮನ್ಮಥನಾಗಲಿ ನನ್ನನ್ನು ಮೋಹಿಸುವುದು ಸಾಧ್ಯವಿಲ್ಲ. ನಿನ್ನನ್ನು ನೋಡಿದ ನನ್ನ ಮನವು ಯಾವ ಜನ್ಮದಲ್ಲಿಯೂ ಅನ್ಯರನ್ನು ಮೋಹಿಸುವುದಿಲ್ಲ."

ಮೂಲದಲ್ಲಿ ರತ್ನಸಿಂಹ ಮುನಿಗಳು ವಿದ್ಯಾಧರೋಽಪಿ ಮದನೋಽಪಿ ನ ವಾಸವೋಽಪಿ ಕಶ್ಚಿನ್ಮನೋ ಹರತಿನಾಥ ಭವಾಂತರೇಽಪಿ ಎಂದು ಹೇಳಿದ್ದಾರೆ. ಅನುವಾದದಲ್ಲಿ 'ವಿದ್ಯಾಧರ' ಎನ್ನುವುದನ್ನು ಬಿಟ್ಟು 'ಇಂದ್ರಗಾಗಲಿ' 'ಕಬ್ಬಿನಾ ಬಾಣಗಾಗಲಿ' ಸಾಧ್ಯವಿಲ್ಲವು ಎಂದು ಅನುವಾದಿಸಿದ್ದಾರೆ. 'ಕಬ್ಬಿನಾ ಬಾಣ'ಗಾಗಲಿ ಎಂದು ಹೇಳಿರುವುದು ಮನ್ಮಥನಿಗೆ. ಮನ್ಮಥನ ಬಿಲ್ಲು 'ಕಬ್ಬಿನ' ಬಿಲ್ಲು ಬಾಣ 'ಪುಷ್ಪಬಾಣ'. ಇಲ್ಲಿ 'ಪುಷ್ಪಬಾಣ' ಎನ್ನುವ ಬದಲು 'ಕಬ್ಬಿನಾ ಬಾಣ' ಎಂದು ಅನುವಾದಿಸಿದ್ದಾರೆ.

ರಾಜೀಮತಿಯ ಯಾವ ಪ್ರಯತ್ನಕ್ಕೂ ನೇಮಿನಾಥನು ಪ್ರತಿಕ್ರಿಯೆ ತೋರದಿದ್ದರೂ ರಾಜೀಮತಿಯು ತನ್ನ ಒಲಿಸಿಕೊಳ್ಳುವ ಪ್ರಯತ್ನವನ್ನು ಬಿಡದೆ ದೇವ, ಈಗಲೇ ನನ್ನ ಸಂಗಡ ಊರಿಗೆ ಬಂದು ರಾಜ್ಯಾಧಿಕಾರವನ್ನು ಪಡೆದುಕೊಂಡು ಭೂ. ಭೋಗಗಳನ್ನು ಹೊಂದಿ ಯೌವನವನ್ನು ಸಾರ್ಥಕ ಮಾಡಿಕೊ. ಊರಿನಲ್ಲಿಯೇ ಇದ್ದು ಧರ್ಮ ಕಾರ್ಯವನ್ನು ಕೈಗೊಂಡು ಮೋಕ್ಷವನ್ನು ಪಡೆಯುವಂತಹ ಮಂಗಳಾತ್ಮಕ ಪ್ರಯತ್ನ ಮಾಡು ಎಂದು ಕೋರುವುದು ಅವಳ ಮುಗ್ಧತೆಯನ್ನು ತೋರಿಸುತ್ತದೆ. ಈ ಮಾತುಗಳು ಮೂಲದಷ್ಟೇ ಸುಂದರವಾಗಿ ಅನುವಾದದಲ್ಲಿಯೂ ಬಂದಿದೆ.

ಮಾನತುಂಗಾಚಾರ್ಯರು ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನ ಸ್ತೋತ್ರದ ಮಹಿಮೆ ಹಾಗೂ ಆದಿನಾಥನ ಭವಸಂಬಂಧಿಯಾದ ಕಥೆಯು ಹೇಳುವವರ ಹಾಗೂ ಕೇಳುವವರ

ಪಾಪವನ್ನು ಪರಿಹರಿಸುತ್ತದೆ ಎಂಬುದನ್ನು ಹೇಳುವಾಗ "ದೂರೇ ಸಹಸ್ರಕಿರಣಃ ಕುರಿತೇ ಪ್ರಭೈವ ಪದ್ಮಾಕರೇಷು ಜಲಜಾನಿ ವಿಕಾಸಭಾಂಜಿ" ಎಂದು ಹೇಳಿದ್ದಾರೆ. ಎಂದರೆ ಭೂಮಿಯಿಂದ ಎಷ್ಟೋ ದೂರದಲ್ಲಿರುವ ಸೂರ್ಯ ಉದಯಿಸುತ್ತಿದ್ದಂತೆಯೇ ಸರೋವರದಲ್ಲಿನ ಕಮಲಗಳು ಅರಳುತ್ತವೆ. ಹಾಗೆಯೇ ವೃಷಭ ದೇವನ ಚರಿತ್ರವನ್ನು ಕೇಳುವುದರಿಂದಲೇ ಪಾಪವು ನಾಶವಾಗುತ್ತದೆ ಎಂದು ಹೇಳಿದ್ದಾರೆ.

ಇದೇ ಮಾತನ್ನು ಪ್ರಾಣಪ್ರಿಯಕಾವ್ಯದಲ್ಲಿ ನೇಮಿನಾಥನ ಸೌಂದರ್ಯವು ನೋಡುವವರನ್ನು ಹೇಗೆ ಆಕರ್ಷಿಸುತ್ತದೆ ಎಂಬುದನ್ನು ಹೇಳುವಾಗ ರಾಜೀಮತಿಯು 'ವಲ್ಲಭೋತ್ತಮ! ನೋಡುವವರ ಕಣ್ಣುಗಳಿಗೆ ಅಮೃತ ಜಲದಂತಹ ಸುಂದರ ರೂಪವನ್ನು ತೋರಿದಾಗ ಸಂತೋಷವಾಗುವುದರಲ್ಲಿ ಆಶ್ಚರ್ಯವೇನಿದೆ? ಸರೋವರದಲ್ಲಿರುವ ಕಮಲಗಳು ಸೂರ್ಯೋದಯ ವಾಗುತ್ತಿದ್ದಂತೆ ವಿಕಸಿಸುವಷ್ಟೇ ಸಹಜವಾಗಿ ನಿನ್ನ ರೂಪವು ನೋಡುಗರನ್ನು ಆಕರ್ಷಿಸುತ್ತದೆ. ಹಾಗೆಯೇ ನಾನು ನಿನ್ನಲ್ಲಿ ಆಕರ್ಷಿತಳಾಗಿದ್ದೇನೆ'.

ಸರ್ವಗುಣಾಕಾರನಾದ ಆದಿನಾಥಸ್ವಾಮಿಯನ್ನು ಆಶ್ರಯಿಸದವರಿಗೂ ಅವನ ಉತ್ತಮ ಗುಣಗಳೇ ಬರುವುದು ಎಂದು ಹೇಳುವಾಗ ಮಾನತುಂಗಾಚಾರ್ಯರು ಧನಿಕನ ದೃಷ್ಟಾಂತವನ್ನು ಕೊಡುತ್ತಾರೆ. ಲೋಕದಲ್ಲಿ ಧನಿಕನು ಅವನ ಆಶ್ರಿತನನ್ನು ತನಗೆ ಸಮಾನನನ್ನಾಗಿ ಮಾಡುತ್ತಾನೆ. ಹಾಗೆಯೇ ಗುಣಸಾಗರನಾದ ಆದಿನಾಥನನ್ನು ಆಶ್ರಯಿಸಿದವರೂ ಸಹ ಅವನ ಗುಣಗಳನ್ನೇ ಪಡೆದು ಅವನಿಗೆ ಸಮಾನರಾಗುತ್ತಾರೆ ಎಂದು ಹೇಳಿದ್ದಾರೆ.

ಪ್ರಾಣಪ್ರಿಯಕಾವ್ಯದಲ್ಲಿ ಸುಂದರಿಯಾದ ರಾಜೀಮತಿಯ ಸಖಿಯರ ಪ್ರಾರ್ಥನೆಯನ್ನು ಮನ್ನಿಸದ ನೇಮಿನಾಥನನ್ನು ಕುರಿತು ರಾಜೀಮತಿಯೇ ತನ್ನ ಹಿರಿಮೆಯನ್ನು ಹೀಗೆ ಹೇಳಿಕೊಳ್ಳುತ್ತಾಳೆ: "ಸುಂದರಿಯಾದ ನಾನು ಯೌವನದಿಂದ ಕೂಡಿದ ದೇಹವನ್ನು ಅನೇಕ ಸದ್ಗುಣಗಳನ್ನು ಹೊಂದಿ ಸತ್ಕುಲದಲ್ಲಿ ಜನಿಸಿದವಳಾಗಿರುವೆ. ನನ್ನಂತಹ ಸುಂದರಿಯನ್ನು ಪಡೆದ ಮಾನವನು ಶ್ರೀಮಂತನನ್ನು ಆಶ್ರಯಿಸಿದ ಆಶ್ರಿತನೂ ಕಾಲಾಂತರದಲ್ಲಿ ಅವನಿಗೆ ಸಮಾನವಾದ ಸುಖವನ್ನು ಅನುಭವಿಸುವಂತೆ ಆನಂದ ಸೌಖ್ಯಗಳನ್ನು ಬಾಳಿನಲ್ಲಿ ಹೊಂದುತ್ತಾನೆ. ಆದ್ದರಿಂದ ಈ ವೈರಾಗ್ಯವನ್ನು ತ್ಯಜಿಸಿ ನನ್ನನ್ನು ವರಿಸಿ ಸುಖದಿಂದಿರು."

ರಾಜೀಮತಿಯ ಸಖಿಯರು ಪ್ರಾರ್ಥಿಸಿದಾಗ ನೇಮಿನಾಥನು ವಿಚಲಿತನಾಗದಿರಲು ಸಖಿಯರು ಉಗ್ರಸೇನ ಮಹಾರಾಜನೇ ಬಂದು ನಿನ್ನ ಮನ ಒಲಿಸಿ ಊರಿಗೆ ಕರೆದುಕೊಂಡು ಹೋಗುವನು ಎನ್ನುತ್ತಾರೆ. ಆಗಲೂ ನೇಮಿನಾಥನು ಯಾವುದೇ ಪ್ರತಿಕ್ರಿಯೆಯನ್ನು ತೋರಿಸುವುದಿಲ್ಲ. ಆಗ ರಾಜೀಮತಿಯೇ ಬಂದು ತನ್ನನ್ನು ತಾನು ಸುಂದರಿ ಎಂದು ಹೇಳಿಕೊಂಡಾಗಲೂ ಹೌದೇ! ಎಂಬ ಕುತೂಹಲವೂ ಇಲ್ಲದೆ ನಿರ್ಲಿಪ್ತನಾಗಿರುತ್ತಾನೆ. ಅವಳನ್ನು ಗಮನಿಸದಷ್ಟು ವೈರಾಗ್ಯಭಾವ ಅವನಲ್ಲಿ ತುಂಬಿರುತ್ತದೆ.

ತನ್ನ ಚೆಲುವನ್ನು ತಾನೇ ಹೇಳಿಕೊಳ್ಳುವುದು ಅವಳು ತನ್ನ ರೂಪದ ಬಗೆಗೆ ಹೊಂದಿರುವ ಅಹಂಭಾವವನ್ನು ತೋರಿಸುತ್ತದೆ. ಅಹಂಭಾವ ಆಕರ್ಷಿಸುವ ಭಾವವಲ್ಲ. ಅದರಲ್ಲೂ ವಿರಾಗಿಯಂತೂ ಅಹಂಭಾವಕ್ಕೆ ಮಣಿಯುವವನಲ್ಲ. ಚೆಲುವೆಯಾದ ರಾಜೀಮತಿ ತನ್ನ ಸೌಂದರ್ಯ ಇತರರ ಕಣ್ ಸೆಳೆಯುವುದು ಎಂದು ಭಾವಿಸಿದ್ದು ಇಲ್ಲಿ ವ್ಯರ್ಥವಾಗಿದೆ.

ಆದಿನಾಥನ ದಿವ್ಯ ಸೌಂದರ್ಯದ ವರ್ಣನೆಯನ್ನು ಮಾಡುತ್ತಾ "ತಮ್ಮ ದರ್ಶನವನ್ನು ಪಡೆದ ಕಣ್ಣುಗಳು ಮತ್ತೇನನ್ನೂ ನೋಡಲು ಇಚ್ಛಿಸುವುದಿಲ್ಲ. ಏಕೆಂದರೆ ಚಂದ್ರ ಕಿರಣದಂತೆ ನಿರ್ಮಲವಾದ ಕ್ಷೀರಸಮುದ್ರದ ನೀರನ್ನು ಕುಡಿದ ಯಾವ ಮನುಷ್ಯನೂ ಉಪ್ಪು ನೀರನ್ನು ಕುಡಿಯಲು ಬಯಸುವುದಿಲ್ಲ:" ಎಂದು ಹೇಳಿದ್ದಾರೆ. ಎಂದರೆ ಆದಿನಾಥನ ಸೌಂದರ್ಯಕ್ಕೆ ಸಮಾನ ಬೇರೆ ಯಾವುದೂ ಇಲ್ಲವೆಂದೂ, ಬೇರಾವುದೇ ವಸ್ತುವು ಸುಂದರವಾದದ್ದು ಎಂದು ಭಾವಿಸಿದರೆ. ಕ್ಷೀರ ಸಮುದ್ರದ ನೀರನ್ನು ಬಿಟ್ಟು ಉಪ್ಪು ನೀರನ್ನು ಬಯಸಿದಂತಾಗುತ್ತದೆ ಎಂದು ಭಕ್ತಾಮರ ಸ್ತೋತ್ರದಲ್ಲಿ ಹೇಳಿದೆ. ಇದೇ ದೃಷ್ಟಾಂತವನ್ನು ರಾಜೀಮತಿಯು 'ಪ್ರಾಣಪ್ರಿಯಕಾವ್ಯ'ದಲ್ಲಿ ಹೀಗೆ ನೀಡುತ್ತಾಳೆ:

ನೇಮಿನಾಥನು ತನ್ನ ಸೌಂದರ್ಯವನ್ನು ಗಮನಿಸದಿದ್ದಾಗ ಅವಳೇ ಮುಂದುವರೆದು 'ಗೌರದೇಹವನ್ನು ಹೊಂದಿದ ಈ ರಮಣೀಯ ನಾರಿಯನ್ನು ನೋಡದೇ ವ್ರತವನ್ನು ಆಚರಿಸಲು ಏಕೆ ಪ್ರಯತ್ನಿಸುವೆ ನಾಥನೆ!? ನಿನ್ನನ್ನು ಬಳಿಸಾರಿ ಬಂದ ಅಮೃತರಸವನ್ನು ದೂರೀಕರಿಸಿ ಸಾಗರದ ಉಪ್ಪು ನೀರನ್ನು ಬಯಸುವವರು ನಿಜವಾಗಿಯೂ ಇರುವರೇ?!' ಎಂದು ಆಶ್ಚರ್ಯ ಚಕಿತಳಾಗುತ್ತಾಳೆ.

ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನ ದಿವ್ಯ ಸೌಂದರ್ಯವನ್ನು ಕ್ಷೀರಸಾಗರಕ್ಕೆ ಹೋಲಿಸಿದರೆ, ತನ್ನ ಸೌಂದರ್ಯವನ್ನೇ ಕ್ಷೀರಸಾಗರಕ್ಕೆ ಹೋಲಿಸಿಕೊಂಡು ನೇಮಿನಾಥನ ವ್ರತವನ್ನು ಉಪ್ಪು ನೀರಿಗೆ ಹೋಲಿಸಿ ಪ್ರಬೋಧಿಸುವ ಪ್ರಯತ್ನ ಮಾಡುತ್ತಾಳೆ.

ಮೂರು ಲೋಕಗಳಲ್ಲೂ ನಡೆಯುತ್ತಿರುವ ಆದಿನಾಥನ ಗುಣಗಾನವನ್ನು ಯಾರೂ ತಡೆಯಲು ಸಾಧ್ಯವಿಲ್ಲ ಎಂದು ಅವನ ಗುಣಾತಿಶಯವನ್ನು ಹೇಳುವಾಗ 'ಕಸ್ತಾನ್ನಿವಾರಯತಿ ಸಂಚರತೋ ಯಥೇಷ್ಟಮ್' ಎಂದು ಹೇಳಿದ್ದಾರೆ.

ಈ ಪಾದವನ್ನು ರತ್ನಸಿಂಹ ಮುನಿಗಳು ರಾಜೀಮತಿಯ ವಿಯೋಗ ದುಃಖವನ್ನು ಹೆಚ್ಚಿಸುವ ಚಂದ್ರ ಕಿರಣಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ ಎಂದು ಹೇಳಲು ಬಳಸಿಕೊಂಡಿದ್ದಾರೆ.

ಶ್ರೀ ಪದ್ಮನಾಭಶರ್ಮರು ಅನುವಾದಿಸಿರುವ ಈ ಪದ್ಯದ ಭಾವವು ಹೀಗಿದೆ: ದೂರದಲ್ಲಿರುವ ನಲ್ಲೆಯನ್ನು ಸಂಧಿಸಲು ಬಯಸಿ ಸಾನುರಾಗದಿಂದ ಬರುವ ನಲ್ಲನು ಎಂತಹ ಹೀನ ಸ್ಥಿತಿಯಲ್ಲಿದ್ದರೂ ತನ್ನ ನಲ್ಲೆಯನ್ನು ಸೇರುತ್ತಾನೆ. ಅವನನ್ನು ನಿರೋಧಿಸಲು ಯಾರಿಂದಲೂ ಸಾಧ್ಯವಿಲ್ಲ. ಹಾಗೆಯೇ ರಾತ್ರಿಯಕಾಲದಲ್ಲಿ ಮಾನಿನಿಯ ವಿಯೋಗ ದುಃಖವನ್ನು ಹೆಚ್ಚಿಸುವ ಚಂದ್ರನ ಕಿರಣಗಳನ್ನು ಯಾರೂ ತಡೆಯಲು ಸಾಧ್ಯವಿಲ್ಲ.

ಆದಿನಾಥನ ಸ್ಥಿರ ಮನಸ್ಸಿನ ಬಗೆಗೆ ಹೇಳುವಾಗ ಮಾನತುಂಗಾಚಾರ್ಯರು 'ಕಿಂ ಮಂದರಾದ್ರಿಶಿಖರಂ ಚಲಿತಂ ಕದಾಚಿತ್' ಎಂದು ಹೇಳಿದ್ದಾರೆ. ಸೌಂದರ್ಯ ಸೌಕುಮಾರ್ಯ ಲಾವಣ್ಯಾದಿ ಗುಣಗಳಿಂದ ಎಂತಹ ಸ್ಥಿರಮನಸ್ಸನ್ನಾದರೂ ಮೋಹಪಡಿಸುವ ಸ್ತ್ರೀಯರೂ ಸಹ ಆದಿನಾಥನ ಮನಸ್ಸಿನಲ್ಲಿ ಮೋಹವನ್ನುಂಟುಮಾಡಲು ಸಾಧ್ಯವಾಗಲಿಲ್ಲ. ಪ್ರಳಯಕಾಲದ ಗಾಳಿಯು ಸಾಧಾರಣವಾದ ಬೆಟ್ಟಗಳನ್ನು ಅಲುಗಾಡಿಸಬಹುದೇ ಹೊರತು ಮಂದರಾದ್ರಿಯನ್ನಲ್ಲ. ಮನೋವಿಕಾರವನ್ನುಂಟು ಮಾಡುವಂತಹ ಸನ್ನಿವೇಶದಲ್ಲೂ ನಿರ್ವಿಕಾರಿಯಾಗಿರುವುದು ನಿಮ್ಮ ಅಸಾಧಾರಣ ಗುಣವೆಂದು ಆದಿನಾಥನ ಚಿತ್ತಸ್ಥಿರತೆಯ ಬಗೆಗೆ ಹೇಳಿದ್ದಾರೆ.

'ಪ್ರಾಣಪ್ರಿಯಕಾವ್ಯ'ದಲ್ಲಿ ನೇಮಿನಾಥನ ಮನಸ್ಸು 'ಚಂಚಲ ಚಿತ್ತ'ವೆಂದು ಹೇಳುವಾಗ 'ಕಿಂ ಮಂದರಾದ್ರಿ ಶಿಖರಂ ಚಲಿತಂ ಕದಾಚಿತ್' ಎಂದು ರಾಜೀಮತಿಯು ನೇಮಿನಾಥನಿಗೆ ಹೇಳುತ್ತಾಳೆ.

ರಾಜೀಮತಿಯನ್ನು ವಿವಾಹವಾಗಲು ಬಂದ ರಾಜಕುಮಾರನು ವೈರಾಗ್ಯವನ್ನು ತಳೆದು ವಿವಾಹವನ್ನು ತಿರಸ್ಕರಿಸುತ್ತಾನೆ. ಆಗ ರಾಜೀಮತಿಯು "ದೇವ ಮೊದಲು ನನ್ನನ್ನು ವಿವಾಹವಾಗಲು ಬಂದೆ. ಈಗ ಮುಕ್ತಿಕಾಂತೆಯನ್ನು ವರಿಸಲು ಹೊರಟಿದ್ದೀಯೆ. ಜ್ಞಾನಿಯಾದ ನಿನ್ನ ಮನಸ್ಸು ಸಹ ಇಷ್ಟು ಚಂಚಲವಾಯಿತೇ. ಸ್ಥಿರ ಚಿತ್ತನೆಂದು ತಿಳಿದ ನಿನ್ನ ಮನವೂ ಚಂಚಲವಾಗಿರುವುದು ಕಾಯ ಬೇಕಾದ ಮಂದರ ಕೂಟವೇ ಚಲಿಸಿದಂತಾಗಿದೆ ಎಂದು ಹೇಳುತ್ತಾಳೆ. ಒಂದೇ ಪಾಠವು ಭಕ್ತಾಮರ ಸ್ತೋತ್ರದಲ್ಲಿ ಚಿತ್ತಸ್ಥಿರತೆಗೆ ಉದಾಹರಣೆಯಾದರೆ ಪ್ರಾಣಪ್ರಿಯಕಾವ್ಯದಲ್ಲಿ ಚಂಚಲಚಿತ್ತದ ಬಗೆಗೆ ಉದಾಹರಣೆಯಾಗಿದೆ.

ಹೊಲಗದ್ದೆಗಳಲ್ಲಿ ಸಮೃದ್ಧವಾದ ಬೆಳೆಯನ್ನು ಪಡೆಯಲು ಮಳೆಗರೆಯುವ ಮೋಡಗಳನ್ನು ನಿರೀಕ್ಷಿಸುವುದು ಸಹಜ. ಆದರೆ ಹೊಲಗದ್ದೆಗಳು ಉತ್ತಮವಾದ ಫಸಲಿನಿಂದ ಕೂಡಿರುವಾಗ ಯಾರೂ ಮಳೆಯನ್ನು ಬಯಸುವುದಿಲ್ಲ. ಲೋಕದ ಕತ್ತಲನ್ನು ಹೋಗಲಾಡಿಸಲು ಸೂರ್ಯ ಚಂದ್ರರು ಅವಶ್ಯಕ. ಆದರೆ ಆದಿನಾಥನ ಮುಖಕಾಂತಿಯೇ ಲೋಕವನ್ನು ಸರ್ವದಾ ಬೆಳಗುವಾಗ ಸೂರ್ಯ ಚಂದ್ರರ ಅವಶ್ಯಕತೆಯಿಲ್ಲ ಎಂದು ಹೇಳಲು ಭಕ್ತಾಮರ ಸ್ತೋತ್ರದಲ್ಲಿ 'ಕಿಯಜ್ಜಲಧರೈರ್ಜಲ ಭಾರನಮ್ರೈಃ' ಎಂದು ಹೇಳಿದ್ದಾರೆ. ಇಲ್ಲಿ ಕತ್ತಲೆಯೆಂದರೆ ಮೋಹಾಂಧಕಾರ. ಮೋಹಾಂಧಕಾರವು ನಾಶವಾದ ಮೇಲೆ ಆತ್ಮವು ಬೇರೇನನ್ನೂ ಬಯಸುವುದಿಲ್ಲ.

ಪ್ರಾಣಪ್ರಿಯಕಾವ್ಯದಲ್ಲಿ ಮೋಹಪರವಶಳಾದ ರಾಜೀಮತಿಯು ನೇಮಿನಾಥನನ್ನು ಎಂತಾದರೂ ಪಡೆಯಲು ಸಿದ್ಧಳಾಗುತ್ತಾಳೆ. ಅವಳು ನೇಮಿನಾಥನನ್ನು ಕುರಿತು ನನ್ನ ವಿಯೋಗ ದುಃಖವನ್ನು ಹೋಗಲಾಡಿಸೆಂದು ನಿನ್ನನ್ನು ಪ್ರಾರ್ಥಿಸುತ್ತಿರುವೆ. ನನ್ನ ಪ್ರಾರ್ಥನೆಯನ್ನು ಮನ್ನಿಸಿದರೆ ನಿನ್ನನ್ನು ಒಲಿಸಿಕೊಳ್ಳಲು ಬೇರೆ ವಶೀಕರಣ ತಂತ್ರಗಳು ಏಕೆ? ಗಡಿಗೆಯ ನೀರಿನಿಂದಲೇ ಕಾಳ್ಗಿಚ್ಚನ್ನು ಪರಿಹರಿಸಲು ಸಾಧ್ಯವಾಗುವುದಾದರೆ ಆಕಾಶದಲ್ಲಿನ ಮೋಡಗಳಿಂದೇನು ಪ್ರಯೋಜನ ಎಂದು ಹೇಳುತ್ತಾಳೆ.

ಭಕ್ತಾಮರ ಸ್ತೋತ್ರದಲ್ಲಿ ಮೋಹಜಾಲದಿಂದ ಬಿಡಿಸಿಕೊಂಡಮೇಲೆ ಬೇರೆ ಯಾವ ಬಯಕೆಯೂ ಇರುವುದಿಲ್ಲ ಎಂದು ಹೇಳಲು ಮೋಡಗಳ ಉದಾಹರಣೆ ನೀಡಿದರೆ ಪ್ರಾಣಪ್ರಿಯಕಾವ್ಯದಲ್ಲಿ ಬಯಕೆಯು ಈಡೇರಿದ ಮೇಲೆ ಬೇರೇನು ಬೇಕು ಎಂಬರ್ಥದಲ್ಲಿ ಮೋಡಗಳ ದೃಷ್ಟಾಂತವನ್ನು ನೀಡಲಾಗಿದೆ.

ಮಾನತುಂಗಾಚಾರ್ಯರ ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನ ವಿಶಿಷ್ಟಗುಣಗಳನ್ನು ವರ್ಣನೆ ಮಾಡಿದ್ದಾರೆ. ಸಂತರು ಅವನನ್ನು ಅವ್ಯಯ, ಅಕ್ಷಯ, ವಿಭು, ಅಚಿಂತ್ಯ ಮೊದಲಾದ ವಿಶೇಷಣಗಳಿಂದ ವರ್ಣನೆ ಮಾಡಿರುವ ಪದ್ಯ ಕೊನೆಯ ಪಾದವು 'ಜ್ಞಾನಸ್ವರೂಪಮಮಲಂ ಪ್ರವದಂತಿ ಸಂತಃ' ಎಂದು ಹೇಳಿದ್ದಾರೆ. ಧನಾತ್ಮಕವಾಗಿ ಹೇಳಿರುವ ಈ ಮಾತು 'ಪ್ರಾಣಪ್ರಿಯ ಕಾವ್ಯದಲ್ಲಿ' ನೇಮಿನಾಥನನ್ನು ರಾಜೀಮತಿಯು ಹಂಗಿಸುವಂತೆ ಬಂದಿದೆ. ರಾಜೀಮತಿಯು ನೇಮಿಯನ್ನು ಪ್ರಾರ್ಥಿಸಿ, ದೈನ್ಯದಿಂದ ಬೇಡಿ, ಅಹಂಕಾರದ ಮಾತುಗಳನ್ನಾಡಿ ಕೊನೆಗೆ ಮೂರ್ಖನೆಂದು ಹಳಿಯುತ್ತಾಳೆ. 'ಜ್ಞಾನಿಗಳು ಪುರುಷನಿಗೆ ನಾರಿಯೇ ಸೌಖ್ಯದ ಸಾರ' ಎನ್ನುತ್ತಾರೆ. ಸುಂದರಿಯೂ ಸ್ವಕುಲಾನುರೂಪಳೂ (ಅನುವಾದದಲ್ಲಿ ಈ ಮಾತು ಇಲ್ಲ) ಆದ ನಾನು ನಿನ್ನ ಬಳಿಸಾರಿ ಬಂದರೂ ನನ್ನನ್ನು ನೋಡಿ ಹೇಗೆ ನಿರ್ಲಿಪ್ತನಾಗಿರುವೆ!? ಜನರು ನಿನ್ನನ್ನು ಜ್ಞಾನರೂಪ ಸುಶೋಭಿತನೆಂದು ಸಾರಿರುವರು. ನನ್ನನ್ನು ವರಿಸಿ ಜನರ ಮಾತು ಸತ್ಯವೆಂದು ನಿರೂಪಿಸು. ಯೌವನ ಕಾಲದಲ್ಲಿ ತಪಸ್ಸಿಗೆ ಹೋಗುವ ಮೂರ್ಖ ಪ್ರಯತ್ನವನ್ನು ಬಿಡು ಎಂದು ಹೇಳುತ್ತಾಳೆ. ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನನ್ನು ಹೊಗಳುವ ಮಾತು 'ಪ್ರಾಣಪ್ರಿಯ ಕಾವ್ಯ'ದಲ್ಲಿ ವ್ಯಂಗ್ಯದ ನುಡಿಯಾಗಿದೆ. ಇದಕ್ಕೆ ಕಾರಣ ರಾಜೀಮತಿಗೆ ನೇಮಿನಾಥನ ಮೇಲಿರುವ ಉತ್ಕಟ ಪ್ರೇಮ.

"ಊರ್ಧ್ವಲೋಕ, ಅಧೋಲೋಕ ಹಾಗೂ ಮಧ್ಯಲೋಕಕ್ಕೆ ಅಮಲ-ನಿರ್ಮಲ-ಮನೋಜ್ಞ-ಪವಿತ್ರ-ಮಂಡನ ಅಲಂಕಾರ ಸ್ವರೂಪನಾದ ಆದಿನಾಥನನ್ನು ತ್ರಿಭುವನಾರ್ತಿಹರ ತ್ರಿಭುವನ ಪರಮೇಶ್ವರ" ಎಂದು ಸ್ತುತಿಸುತ್ತಾ "ತುಭ್ಯಂ ನಮೋ ಜಿನ ಭವೋದಧಿಶೋಷಣಾಯ" – ಸಕಲ ದುಃಖಗಳಿಗೂ ಕಾರಣವಾದ ಈ ಭವಸಾಗರವನ್ನು ಶೋಷಿಸಿ – ಭವಸಾಗರದಿಂದ ಪಾರು ಮಾಡು – ಎಂದು ಮಾನತುಂಗಾಚಾರ್ಯರು ಆದಿನಾಥನನ್ನು ಪ್ರಾರ್ಥಿಸುತ್ತಾರೆ. ಭಕ್ತಾಮರ ಸ್ತೋತ್ರದ ಈ ಶ್ಲೋಕದ ವಿವರಣೆಯಲ್ಲಿ ಸಂಸಾರವು ಎಷ್ಟು ನಿಸ್ಸಾರವಾದುದು ಹೇಗೆ ದುಃಖಕ್ಕೆ ಕಾರಣವೆಂಬುದಕ್ಕೆ ಉದಾಹರಣೆಯಾಗಿ ನೇಮಿಕಥೆಯನ್ನೇ ಕೊಟ್ಟಿದ್ದಾರೆ. ಶಾಶ್ವತ ಸುಖ ಪಡೆಯಲು ಇಚ್ಛಿಸುವ ನಮ್ಮನ್ನು ಭವಸಾಗರದಿಂದ ಪಾರುಮಾಡಿಸು ಎಂದು ಆದಿನಾಥನನ್ನು ಕೇಳಿಕೊಳ್ಳುತ್ತಾರೆ.

ಪ್ರಾಣಪ್ರಿಯ ಕಾವ್ಯದಲ್ಲಿ "ತುಭ್ಯಂ ನಮೋ ಜಿನ ಭವೋದಧಿ ಶೋಷಣಾಯ" ಎಂಬುದು ನೇಮಿನಾಥನಿಗೆ ಹೇಳುವ ಮಾತು. ರಾಜೀಮತಿಯು ತನ್ನ ವಿಯೋಗ ದುಃಖವನ್ನು

ಹೇಳಿಕೊಳ್ಳುತ್ತಾ, ಸಾಗರಗಳನ್ನೆಲ್ಲ ಹೀರಲು ಸಮರ್ಥನಾದ ಅಗಸ್ತ್ಯನೂ ಸಹ ನನ್ನ ವಿಯೋಗವೆಂಬ ದುಃಖ ಸಾಗರವನ್ನು ಹೀರಲು ಅಶಕ್ತನಾದ. ಭೋಗಸಾಗರದಲ್ಲಿ ಮಗ್ನಳಾಗಿಹ ನಾನು ನಿನಗೆ ಶರಣಾಗಿದ್ದೇನೆ. ನನ್ನನ್ನು ಸ್ವೀಕರಿಸಿ ನನ್ನ ವಿಯೋಗ ದುಃಖ ವಾರಿಧಿಯನ್ನು ಶೋಷಿಸು ಎಂದು ವೈರಾಗ್ಯನಿಧಿಯಾದ ನೇಮಿನಾಥನನ್ನು ಪ್ರಾರ್ಥಿಸುತ್ತಾಳೆ.

'ಅಶೋಕ ವೃಕ್ಷದ ಕೆಳಭಾಗದಲ್ಲಿ ಕುಳಿತಿರುವ ಆದಿತೀರ್ಥಂಕರನನ್ನು ಸ್ತೋತ್ರಮಾಡುತ್ತಾ ಸಮಸ್ತ ಅಂಧಕಾರ ಸಮೂಹವನ್ನು ನಾಶಮಾಡಿ ನಿಬಿಡ ಮೋಡಗಳ ಸಮೀಪದಲ್ಲಿರುವಂಥ ಸೂರ್ಯಬಿಂಬಕ್ಕೆ ಸಮಾನವಾಗಿ – ಕಾಂತಿಯುಕ್ತವಾಗಿ – ಕಾಣುತ್ತಾರೆ ಎಂದು ಹೇಳುವಾಗ 'ಬಿಂಬಂ ರವೇರಿವ ಪಯೋಧರ – ಪಾರ್ಶ್ವವರ್ತಿ' ಎಂದು ಭಕ್ತಾಮರ ಸ್ತೋತ್ರದಲ್ಲಿ ಹೇಳಿದ್ದಾರೆ.

ಭಕ್ತಾಮರ ಸ್ತೋತ್ರದಲ್ಲಿ ಆದಿನಾಥನಿಗೆ ಹೇಳಿದ ಮಾತುಗಳನ್ನು ನೇಮಿನಾಥನಿಗೆ ಅನ್ವಯಿಸಿ ಪ್ರಾಣಪ್ರಿಯ ಕಾವ್ಯದಲ್ಲಿ ರಾಜೀಮತಿಯು ದುಃಖದಿಂದ ಹೀಗೆ ಹೇಳುತ್ತಾಳೆ: "ಲಗ್ನ ಕಾಲದೆ ಸುಖಮಗ್ನಳಾಗಿದ್ದ ನನಗೆ ನಿನ್ನ ಮುಖ ಪಂಕಜವು ಸ್ವಲ್ಪ ಹೊತ್ತು ಮಾತ್ರ ಕಾಣಿಸಿತು. ಆ ರಸಮಯ ಘಳಿಗೆ ಭಗ್ನವಾಯಿತು! ಹೇಳುವುದೇನು? ನಿನ್ನ ಮುಖವು ಮೋಡದ ಹಿಂದೆ ಮರೆಯಾಗುವ ಸೂರ್ಯ ಬಿಂಬದ ರೀತಿಯಲ್ಲಿ ಮಾಯವಾಯಿತು."

ಲಗ್ನ ಕಾಲದೆ ಎಂದರೆ ಮದುವೆಯ ಸಮಯದಲ್ಲಿ ರಾಜಕುಮಾರನನ್ನು ಸ್ವಲ್ಪ ಹೊತ್ತು ಮಾತ್ರ ನೋಡಿದೆ ಎಂದು ಹೇಳುತ್ತಾಳೆ. ಇದಲ್ಲದೆ ಇವಳು ರಾಜಕುಮಾರನನ್ನು ಹಲವು ಬಾರಿ ವಲ್ಲಭ, ನಾಥ ಮುಂತಾಗಿ ಸಂಬೋಧಿಸುತ್ತಾಳೆ. ಪ್ರಾಣಪ್ರಿಯ ಕಾವ್ಯದ ಹಿನ್ನೆಲೆ ಕಥೆಯಲ್ಲಾಗಲೀ, ಕಾವ್ಯದಲ್ಲಾಗಲೀ ವಿವಾಹ ವಿಧಿಗಳು ಆರಂಭವಾದ ಸೂಚನೆಯಿಲ್ಲದಿರುವುದರಿಂದ ಇದ್ದಕ್ಕಿದ್ದಂತೆ 'ಲಗ್ನ ಕಾಲದೆ' ಎಂದು ಹೇಳುವುದು ಪಾಠಕರನ್ನು ತಬ್ಬಿಬ್ಬುಗೊಳಿಸಿದಂತಾಗುತ್ತದೆ.

ಆದಿನಾಥನ ನಾಮಸಂಕೀರ್ತನೆಯ ಮಹಿಮಯ ಬಗೆಗೆ "ಶಾಂತ ಜಲರೂಪದ ತಮ್ಮ ನಾಮಸ್ಮರಣೆಯು ಪ್ರಳಯಕಾಲದ ಚಂಡ ಮಾರುತದಿಂದ ಉತ್ತೇಜಿತವಾಗಿ ಜಗತ್ತನ್ನೇ ನುಂಗಿ ಬಿಡುವಂತೆ ಎದುರಿಗೆ ಬರುತ್ತಿರುವ ಕಾಡ್ಗಿಚ್ಚನ್ನೂ ಸಹ ಶಾಂತವಾಗಿಸುತ್ತದೆ – ಎಂದು ಮಾನತುಂಗಾಚಾರ್ಯರು ಹೇಳಿದ್ದಾರೆ.

ಭಕ್ತಾಮರ ಸ್ತೋತ್ರದಲ್ಲಿ [2] ಆದಿನಾಥನ ನಾಮಸ್ಮರಣೆಯಿಂದ ಕಾಳ್ಗಿಚ್ಚೂ ಶಾಂತವಾಗುತ್ತದೆ ಎಂದು ಹೇಳಿದ್ದರೆ ಪ್ರಾಣಪ್ರಿಯ ಕಾವ್ಯದಲ್ಲಿ ನೇಮಿನಾಥನ ನಾಮಸ್ಮರಣೆಯು ಶೋಕಾಗ್ನಿಯನ್ನು ನಂದಿಸುವಂತಾಗಲಿ ಎಂದು ರಾಜೀಮತಿಯು ಪ್ರಾರ್ಥಿಸುತ್ತಾಳೆ. ಅಶಕ್ತನೂ ಸಹ ತನ್ನ ಪತ್ನಿಯನ್ನು ಪರರ ಪೀಡನೆಯಿಂದ ರಕ್ಷಿಸಲು ಪ್ರಯತ್ನಿಸುತ್ತಾನೆ. ಯದುವಂಶ ಶ್ರೇಷ್ಠನಾದ ನೀನು ಯುಕ್ತಿಯಿಂದ ನನ್ನ ಶೋಕಾಗ್ನಿ ವಿಶೇಷವನ್ನು ನಿಮ್ಮ ನಾಮ ಸಂಕೀರ್ತನೆ ಎಂಬ ಜಲದಿಂದ ನಿವಾರಿಸು ಎಂದು ಬೇಡುತ್ತಾಳೆ.

ಆದಿತೀರ್ಥಂಕರ ಪಾದಪದ್ಮಗಳನ್ನು ಆಶ್ರಯಿಸಿದವರು ಹೇಗೆ ಶ್ರೇಯಸ್ಸನ್ನು ಪಡೆಯುತ್ತಾರೆ ಎಂಬುದನ್ನು ಮಾನತುಂಗಾಚಾರ್ಯರು ಈ ರೀತಿ ಹೇಳಿದ್ದಾರೆ: "ತಮ್ಮ ಭಕ್ತ ಯೋಧನು ದುರ್ಜಯರಾದ ವಿರೋಧಿಗಳನ್ನು ಕೂಡಲೆ ಜಯಿಸುತ್ತಾನೆ. ಇದಕ್ಕೆ ಕಾರಣ ಭಕ್ತನು ತಮ್ಮ ಸುಂದರವಾದ ಚರಣ ರೂಪ ಕಮಲಗಳ ಛತ್ರಛಾಯೆಯಲ್ಲಿದ್ದಾನೆ ಎಂದು ತಿಳಿದುಬರುತ್ತದೆ".

'ಪ್ರಾಣಪ್ರಿಯ ಕಾವ್ಯ'ದಲ್ಲಿ 'ತ್ವತ್ಪಾದ ಪಂಕಜವನಾಶ್ರಯಣೋ ಲಭಂತೇ' ಎಂಬ ಮಾತು ನೇಮಿನಾಥನ ಪಾದವನ್ನು ಆಶ್ರಯಿಸಿದವರಿಗೆ ದೊರೆಯುವ ಶ್ರೇಯಸ್ಸನ್ನು ಕುರಿತು ಹೇಳುವ ಮಾತು. "ವಲ್ಲಭಾ, ನಿನ್ನ ಪಾದ ಪದ್ಮಗಳನ್ನು ಆಶ್ರಯಿಸಿದವರಿಗೆ ಐಶ್ವರ್ಯ, ಉನ್ನತವಾದ ಅಧಿಕಾರ, ಸಿರಿವಂತರಾದ ಮಕ್ಕಳು, ದಾನಮಾಡುವ ಬುದ್ಧಿ, ಉತ್ತಮವಾದ ಯಶಸ್ಸುಗಳು ದೊರೆಯುವುದು ಎಂದು ರಾಜೀಮತಿಯಿಂದ ಹೇಳಿಸುವ ಈ ಮಾತುಗಳು ಕಾವ್ಯದ ಕೊನೆಯಲ್ಲಿ ಹೇಳುವ ಫಲಶ್ರುತಿಯಂತಿದೆ.

ರಾಜೀಮತಿಯ ಶೃಂಗಾರ ಪೂರ್ಣವಾದ ಮಾತುಗಳಿಗಾಗಲೀ ರೂಪ-ಸೌಂದರ್ಯಗಳಿಗಾಗಲೀ ಮಣಿಯದ ನೇಮಿನಾಥನು ಸಂಸಾರವು ಎಷ್ಟು ನಿಸ್ಸಾರವಾದುದೆಂದೂ, ಬಂಧುಗಳು ಹೇಗೆ ಬಂಧನವಾಗುತ್ತಾರೆ, ಅರ್ಥವು ಹೇಗೆ ಅನರ್ಥಕ್ಕೆ ಕಾರಣವಾಗುತ್ತದೆ ಎಂದು ಉಪದೇಶಿಸುತ್ತಾನೆ. ನೇಮಿನಾಥನ ಮಾತಿನಿಂದ ಶುದ್ಧ ಬುದ್ಧಿಯನ್ನು ಪಡೆದ ರಾಜೀಮತಿಯು ದೀಕ್ಷೆಯನ್ನು ಪಡೆದು ಆರ್ಜಿಕೆಯಾದಳು.

## ಅಧ್ಯಾಯ 4 – ಅಡಿ ಟಿಪ್ಪಣಿಗಳು

(1) ದೇವ, ಮಾನವ, ನಾರಕಿ, ತಿರ್ಯಗ್ – ಕನ್ನಡ ಜೈನ ಪುರಾಣಗಳು ಒಂದು ಸಮಗ್ರ ಅಧ್ಯಯನ – ಡಾ. ಎಸ್. ಶಿವಾನಂದ 2008 – ಪ್ರ.: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ಪುಟ 101.

(2) ಭಕ್ತಾಮರ ಸ್ತೋತ್ರ – ಸಂಪಾದಕರು: ಎಂ.ಬಿ.ಸೇಡಬಾಳ, ಷಹಾಪುರ – ಬೆಳಗಾವಿ – ಪುಟ 169.

ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀಯ್ಯವರು ತಮ್ಮ ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನದಲ್ಲಿ (ಚಾವುಂಡರಾಯ ಪುರಾಣ ಭಾಗವಾದ ನೇಮೀಶ್ವರ ಪುರಾಣ ಮತ್ತು ಕರ್ಣಪಾರ್ಯ ನೇಮಿಚಂದ್ರರ ನೇಮಿನಾಥ ಪುರಾಣಗಳು) ನೇಮಿನಾಥನ ಕಥೆಯ ಹೋಲಿಕೆ ವ್ಯತ್ಯಾಸಗಳ ಒಟ್ಟು ನೋಟ ಎಂಬ ಭಾಗದ 'ಪರಿನಿಷ್ಕ್ರಮಣ' ಎಂಬ ಉಪಶೀರ್ಷಿಕೆಯಲ್ಲಿ ನೇಮಿನಾಥನ ವೈರಾಗ್ಯ ಪ್ರಸಂಗದ ಕೆಲವು ಹೋಲಿಕೆ ವ್ಯತ್ಯಾಸಗಳನ್ನು ಗುರಿತಿಸಿದ್ದರೂ. ಅವರು ಕನ್ನಡದ ಎಲ್ಲ ನೇಮಿನಾಥ ಪುರಾಣಗಳಲ್ಲಿನ (ಮಂಗರಸನ ನೇಮಿಜಿನೇಶ ಸಂಗತಿ. ಸಾಳ್ವ ಭಾರತ. ಹರಿವಂಶಾಭ್ಯುದಯ) ವೈರಾಗ್ಯದ ಪ್ರಸಂಗಗಳಲ್ಲಿಯೂ ಇರುವ ವ್ಯತ್ಯಾಸಗಳನ್ನು ಗುರುತಿಸಿಲ್ಲ.

# ಉಪಸಂಹಾರ

'ಪ್ರಾಣಪ್ರಿಯ ಕಾವ್ಯ'ವು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗೊಂಡ ಸುಂದರ ಲಘು ಕಾವ್ಯ. ಈ ಕಾವ್ಯವು ಕಾವ್ಯದ ನಾಯಕಿಯಾದ ರಾಜೀಮತಿಯ ಸಖಿಯರು ಹಾಗೂ ರಾಜೀಮತಿಯು ನೇಮಿನಾಥನೊಡನೆ ನಡೆಸುವ ಸಂವಾದದಿಂದ ಆರಂಭವಾಗುತ್ತದೆ. ರಾಜೀಮತಿಯು ತಪಸ್ಸಿಗೆ ಹೊರಟ ನೇಮಿನಾಥನನ್ನು ಪುನಃ ಸಂಸಾರಕ್ಕೆ ಎಳೆಸಲು ಶೃಂಗಾರಪೂರ್ಣ ಮಾತುಗಳಿಂದ ರಾಜಕುಮಾರನೊಡನೆ ಸಂಭಾಷಣೆಗೆ ತೊಡಗುತ್ತಾಳೆ. ಮೊದಲು ಅವಳ ಸಖಿಯರು ಜಿಂಕೆ ಕಣ್ಗಳ ಸುಂದರಿಯನ್ನು ಸೇರು ಎಂದು ಪ್ರಾರ್ಥಿಸುತ್ತಾರೆ. ನಂತರ ಬಲಶಾಲಿಯಾದ ಉಗ್ರಸೇನನೇ ತನ್ನ ಮಗಳ ರಕ್ಷಣೆಗೆ ಬಂದು ನಿನ್ನನ್ನು ಬಲಾತ್ಕಾರವಾಗಿ ಊರಿಗೆ ಕರೆದುಕೊಂಡು ಹೋಗುತ್ತಾನೆ ಎಂಬ ಬೆದರಿಸುವಂತಹ ಮಾತುಗಳನ್ನಾಡುತ್ತಾರೆ. ವೈರಾಗ್ಯದ ಖನಿಯಾದ ನೇಮಿನಾಥನೂ ಯಾವ ಮಾತಿಗೂ ವಿಚಲಿತನಾಗದೆ ಇರುವುದನ್ನು ನೋಡಿ ರಾಜೀಮತಿಯೇ ತನ್ನ ಸೌಂದರ್ಯದ ಪ್ರಶಂಸೆ ತಾನೇ ಮಾಡಿಕೊಳ್ಳತೊಡಗುತ್ತಾಳೆ. ಆಗಲೂ ನೇಮಿನಾಥನು ಇವಳು ಸುಂದರಿಯೇ ಎಂದು ಒಮ್ಮೆಯೂ ಕುತೂಹಲದಿಂದಲೂ ನೋಡದೆ ಇರುವುದು ಒಂದು ರೀತಿಯಲ್ಲಿ ಅವಳನ್ನು ಅಪಮಾನಿಸಿದಂತೆಯೇ ಆಗುತ್ತದೆ. ಆದರೂ ಅವಳು ನೇಮಿಯನ್ನು ಒಲಿಸಿಕೊಳ್ಳುವ ತನ್ನ ಪ್ರಯತ್ನವನ್ನು ಬಿಡದೇ ಮುಂದುವರೆಸುತ್ತಾಳೆ.

ಹೀಗೆ ಸ್ತ್ರೀಯೊಬ್ಬಳು ಪುರುಷನ ಸಮಾಗಮವನ್ನು ಬಯಸಿ ಸಂವಾದ ನಡೆಸುವುದು, ಪುರುಷರು ಸ್ತ್ರೀಯ ಸಮಾಗಮವನ್ನು ಬಯಸಿ ಪ್ರಾರ್ಥಿಸುವ ಪ್ರಸಂಗಗಳು ಕನ್ನಡ-ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಕಂಡುಬರುವ ಪರಿಚಿತ ವಿಷಯಗಳೇ ಆಗಿವೆ. ಪುರಾಣ-ಕಾವ್ಯಗಳ ಒಂದು ಭಾಗವಾಗಿ ಬರುವ ಈ ಪ್ರಸಂಗಗಳ ಸೃಷ್ಟಿಯ – ರಚನೆಯ – ಉದ್ದೇಶ ಭಿನ್ನವಾಗಿರುತ್ತದೆ. ಉದಾಹರಣೆಗೆ ರಂಭಾ-ಶುಕ ಸಂವಾದ. ಅಲ್ಲಮ ಹಾಗೂ ಮಾಯೆಯ ಪ್ರಸಂಗಗಳನ್ನು ನೋಡಿದರೆ ರಂಭೆಯ ಉದ್ದೇಶ ಶುಕಮುನಿಗಳ ತಪಸ್ಸನ್ನು ಭಂಗಗೊಳಿಸುವುದೇ ಆಗಿರುತ್ತದೆ. ಹಾಗೆಯೇ ಸುಂದರವಾದ ಅಲ್ಲಮನ ರೂಪಕ್ಕೆ ಮನಸೋತ ಮಾಯೆಯು ಅವನ ಸಮಾಗಮವನ್ನು ಬಯಸುತ್ತಾಳೆ. ಆದರೆ ಪ್ರಾಣಪ್ರಿಯ ಕಾವ್ಯದಲ್ಲಿ ರಾಜೀಮತಿಯು ನೇಮಿನಾಥನನ್ನು ಅಷ್ಟು ದೈನ್ಯವಾಗಿ ಪ್ರಾರ್ಥಿಸಲು ಕಾರಣ ಕೇವಲ ಅವನ ರೂಪ. ರಾಜಕುಮಾರನಲ್ಲಿರಬಹುದಾದ ಐಶ್ವರ್ಯ ಅಧಿಕಾರಗಳಲ್ಲ.

ವಿವಾಹ ವಿಧಿಗಳು ಆರಂಭವಾಗಿ ಮದುವೆಯ ಎರಡನೆಯ ದಿನ ನೇಮಿನಾಥನು – ಪಾಣಿಗ್ರಹಣದ ಸಮಯದಲ್ಲಿ – ನಿರ್ವೇಗ ಹೊಂದುತ್ತಾನೆ. ಇದರಿಂದ ಅವಳು ಬಹಳವಾಗಿನೊಂದು ದೈನ್ಯವಾಗಿ ಪ್ರಾರ್ಥಿಸುತ್ತಾಳೆ. ಇದರ ಸೂಚನೆ ಸಾಳ್ವ ಭಾರತ ಮತ್ತು ಮಹಾಪುರಾಣಗಳಲ್ಲಿ ಮಾತ್ರ ಸ್ಪಷ್ಟವಾಗಿ ದೊರೆಯುತ್ತದೆ. ಆದರೆ ಬೇರೆ ನೇಮಿಕಾವ್ಯಗಳಲ್ಲಿ ಈ ಸೂಚನೆ ಇಲ್ಲ. ಇಂದಿನ ಕಾಲಮಾನದ, ಜನರಿಗೆ 'ಅವನನ್ನು ಅಷ್ಟೊಂದು ಬೇಡಬೇಕೆ?' ಎಂಬ ಭಾವನೆ ಬರುವುದು ಸಹಜವಾದರೂ ಇದು 17ನೇ ಶತಮಾನದ ಸಾಮಾಜಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಘಟನೆಯೂ ಆಗಿದೆ. ಈ ಘಟನೆ ಆಗಿನ ಕಾಲದಲ್ಲಿ 'ವಿವಾಹ'ದ ಬಗೆಗೆ ಇದ್ದ ಪವಿತ್ರವಾದ ಭಾವನೆಯನ್ನು ಪ್ರತಿಬಿಂಬಿಸುತ್ತದೆ.

ಮಹಾಭಾರತದಲ್ಲಿ ಅಂಬೆಯು ಭೀಷ್ಮನಿಂದ – ಬ್ರಹ್ಮಚರ್ಯ ವ್ರತದ ಕಾರಣದಿಂದ – ತಿರಸ್ಕರಿಸಲ್ಪಡುತ್ತಾಳೆ. ಆಗ ಕ್ಷತ್ರಾಣಿಯಾದ ಅಂಬೆಯು ರೋಷದಿಂದ "ಮುಂದೆ ಶಿಖಂಡಿಯಾಗಿ ಬಂದು ನಿನ್ನ ಸಾವಿಗೆ ನಾನೇ ಕಾರಣಳಾಗುತ್ತೇನೆಂದು" ಪ್ರತಿಜ್ಞೆ ಮಾಡಿ ಅಗ್ನಿಪ್ರವೇಶ ಮಾಡುತ್ತಾಳೆ. ಪ್ರಾಣಪ್ರಿಯ ಕಾವ್ಯದಲ್ಲಿ ರಾಜಕುಮಾರಿಯಾದರೂ ಜೈನಶ್ರಾವಕರ ಪುತ್ರಿಯಾದ ರಾಜೀಮತಿಯು ನೇಮಿನಾಥನಿಂದ ತಿರಸ್ಕರಿಸಲ್ಪಟ್ಟರೂ ನಂತರ ಅವನು ನೀಡುವ ಉಪದೇಶದಿಂದ ಧರ್ಮಬುಧ್ಧಿಯನ್ನು ತಳೆದು ದೀಕ್ಷೆ ಪಡೆದು ಆರ್ಜಿಕೆಯಾಗುತ್ತಾಳೆ.

ಕನ್ನಡ ನೇಮಿನಾಥ ಪುರಾಣಗಳಲ್ಲಿನ ವೈರಾಗ್ಯ ಪ್ರಸಂಗದ ತೌಲನಿಕ ಅಧ್ಯಯನದಿಂದ ಈ ಅಂಶಗಳನ್ನು ಗಮನಿಸಬಹುದು:

ಮೇಲಿನ ಘಟನೆಗಳಿಗೆ ಶ್ರೀಕೃಷ್ಣನ ಹಂಚಿಕೆಯೇ ಕಾರಣ ಎಂದು ಮೇಲ್ನೋಟಕ್ಕೆ ನೇಮಿಕಾವ್ಯಗಳನ್ನು ಓದುವವರಿಗೆ ತೋರುತ್ತದೆ. 'ಸಾಳ್ವ ಭಾರತ' ಹಾಗೂ ಮಹಾಪುರಾಣಗಳಲ್ಲಿ ಶ್ರೀಕೃಷ್ಣ, ಕುಮಾರನಲ್ಲಿ ರಾಗವುಂಟಾಗಿರುವುದನ್ನು ಗಮನಿಸಿ ವಿವಾಹವನ್ನು ಏರ್ಪಡಿಸುತ್ತಾನೆ. ನೇಮಿಯು ಅಸಾಧಾರಣ ಕಾರ್ಯಗಳನ್ನು ಮಾಡಿ ತೋರಿಸಲೂ ಸಹ ಅವನ ಮನವು ರಾಗದಿಂದ ಕೂಡಿದ್ದುದೇ ಕಾರಣ – ರಾಗಾಹಂಕಾರಯೋರ್ಲೇಶೋಪ್ಯವಶ್ಯಂ ವಿಕೃತಿಂ ನಯೇತ್ – ಎಂದು ಮಹಾಪುರಾಣದಲ್ಲಿಯೂ ಹೇಳಿದೆ. ಇದನ್ನು ಗಮನಿಸಿದ ಕೃಷ್ಣನು ವಿವಾಹವನ್ನೇರ್ಪಡಿಸಿ, ವಿವಾಹದ ಎರಡನೆಯ ದಿನ ರಾಜ್ಯಲೋಭದಿಂದ ವೈರಾಗ್ಯವುಂಟಾಗುವಂತೆ ಮಾಡುತ್ತಾನೆ.

ಈ ರೀತಿಯಾಗಿ ಬೇರೆ ಬೇರೆ ನೇಮಿನಾಥ ಪುರಾಣಗಳಲ್ಲಿ ವೈರಾಗ್ಯ ಪ್ರಸಂಗವು ಹೇಗೆ ಭಿನ್ನವಾಗಿವೆ ಎಂಬುದರ ಅಧ್ಯಯನ ಮಾಡಲಾಗಿದೆ.

ಶ್ರೀ ಭುವನಹಳ್ಳಿ ಪದ್ಮನಾಭ ಶರ್ಮರು ತಮ್ಮ 'ಪ್ರಾಣಪ್ರಿಯ ಕಾವ್ಯ'ದಲ್ಲಿ ಮೂಲ ಹಾಗು ಅನುವಾದ ಎರಡನ್ನೂ ನೀಡಿದ್ದಾರೆ. ಇದರಿಂದ ಮೂಲ ಹಾಗೂ ಅನುವಾದಗಳನ್ನು ಹೋಲಿಸಿ ನೋಡಲು ಅನುಕೂಲವಾಗುತ್ತದೆ. ಕಾವ್ಯದ ಎಲ್ಲ ಪದ್ಯಗಳನ್ನೂ ಮಲ್ಲಿಕಾಮಾಲೆಯಲ್ಲಿ ರಚಿಸಿರುವುದು ಶರ್ಮರ ವೈಶಿಷ್ಟ್ಯ. ಅವರು ಸಂಸ್ಕೃತದಲ್ಲಿ ಓದಿ ಆನಂದಿಸಿದ ಕಾವ್ಯವನ್ನು ಕನ್ನಡಿಗರೂ ಓದಿ ಆನಂದಿಸಲಿ ಎಂಬ ಉದ್ದೇಶದಿಂದಲೇ ಅನುವಾದಿಸಿರುವುದು ಅವರ ಸಹೃದಯತೆಯನ್ನು (ಪ್ರತೀಕ) ತೋರುತ್ತದೆ. ಇದರಿಂದ ಒಂದು ಉತ್ತಮವಾದ ಕೃತಿ ಕನ್ನಡ ಓದುಗರಿಗೆ ದೊರೆತಂತಾಗಿದೆ.

ಇಡೀ ಕಾವ್ಯವು ಮಲ್ಲಿಕಾಮಾಲೆಯಲ್ಲೇ ಇರಬೇಕೆಂಬುದು ಶರ್ಮರ ಉದ್ದೇಶವಾಗಿದ್ದುದರಿಂದ ಕೆಲವೆಡೆ ಪದ್ಯ ಸಾಲುಗಳಲ್ಲಿ ಕಾವ್ಯಾಂಶ ಕಡಿಮೆಯಾಗಿ ಗದ್ಯದಂತೆ ತೋರುತ್ತದೆ. ಛಂದಸ್ಸಿಗನುಸಾರವಾಗಿ ಪದಗಳನ್ನು 'ಆ'ಕಾರಾಂತ ಮಾಡಿರುವುದು ಅನ್ವಯ ಮಾಡುವಾಗ ತೊಡಕು ಎನಿಸುತ್ತದೆಯಾದರೂ ಒಟ್ಟಾರೆ ಶರ್ಮರು ಕನ್ನಡಕ್ಕೆ ಒಂದು ಸುಂದರ ಕಾವ್ಯವನ್ನು ಪರಿಚಯಿಸಿದ್ದಾರೆ.

# ಅನುಬಂಧ

(1) ಗ್ರಂಥ ಸೂಚಿ

(2) ಲೇಖನ ಸೂಚಿ

(3) ಪ್ರಾಣಪ್ರಿಯ ಕಾವ್ಯದ 'ಅ'ಕಾರಾದಿ, ಹಾಗೂ

(4) ಶ್ರೀ ಡಿ.ಪದ್ಮನಾಭ ಶರ್ಮರ ಗ್ರಂಥ ಲೇಖನ ಸೂಚಿ

# ಅನುಬಂಧ – 1

## ಗ್ರಂಥ ಸೂಚಿ


1. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ–(ಲೇ.) ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ.ಪ್ರಸಾರಾಂಗ,ಮೈಸೂರು ವಿಶ್ವವಿದ್ಯಾನಿಲಯ,ಮೈಸೂರು. 1973.
2. ಪ್ರಾಣಪ್ರಿಯ ಕಾವ್ಯ–(ಅನುವಾದಕರು)ಶ್ರೀ.ಪದ್ಮನಾಭ ಶರ್ಮ.
3. ಚಾವುಂಡ ರಾಯ ಪುರಾಣ–(ಸಂ.)ಪ್ರೊ.ಕಮಲ ಹಂಪನಾ.ಪ್ರ.:ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. 2006.
4. ನೇಮಿಜಿನೇಶ ಸಂಗತಿ–ಮಂಗರಸ,(ಸಂ.)ಪಂಡಿತ ರತ್ನ ಎ.ಶಾಂತಿರಾಜ ಶಾಸ್ತ್ರಿ,ಮೈಸೂರು,1931.
5. ಭಕ್ತಾಮರಾದಿ ಪಂಚಸ್ತೋತ್ರ ಭಾವಪ್ರಕಾಶಿಕ:(ಸಂ.)ಎರ್ತೂರು ಶಾಂತಿರಾಜ ಶಾಸ್ತ್ರಿ.ಎ.ಶಾಂತಿರಾಜ ಶಾಸ್ತ್ರಿ, ಜಯನಗರ, ಬೆಂಗಳೂರು–560070.ಮಾರ್ಚ್, 2007.
6. ನೇಮಿನಾಥ ಪುರಾಣ–ಕರ್ಣಪಾರ್ಯ–(ಗ.ಅ.)ಹಂ.ಪ.ನಾಗರಾಜಯ್ಯ ಮತ್ತು ಆರ್.ವಿ. ಕುಲಕರ್ಣಿ.2004. ಪ್ರ.ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು. 2001.
7. ನೇಮಿನಾಥ ಪುರಾಣಂ–ನೇಮಿಚಂದ್ರ (ಗ.ಅ.)ಆರ್.ವಿ.ಕುಲಕರ್ಣಿ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು. ಪಂಪಮಹಾಕವಿ ರಸ್ತೆ. ಚಾಮರಾಜಪೇಟೆ. ಬೆಂಗಳೂರು. 2001.
8. ನೇಮಿಚಂದ್ರ ಸಂಪುಟ–(ಸಂ.)ಪ್ರೊ.ದೇ.ಜವರೇಗೌಡ. ಪ್ರ.ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ.2006.
9. ಹರಿವಂಶಾಭ್ಯುದಯಂ–(ಸಂ.)ಬಿ.ಎಸ್.ಸಣ್ಣಯ್ಯ. ಪ್ರ:ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ,ಮೈಸೂರು. 1974.
10. ಬಂಧುವರ್ಮ ಸಂಪುಟ–(ಸಂ.) ಬಿ.ಎಸ್.ಸಣ್ಣಯ್ಯ, ಪ್ರ:ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2006.
11. ಕನ್ನಡ ಸಾಹಿತ್ಯ ಚರಿತ್ರೆ–(ಲೇ.)ರಂ.ಶ್ರೀ.ಮುಗಳಿ,ಪ್ರ:ಗೀತ ಬುಕ್ ಹೌಸ್, ಮೈಸೂರು–570001, 2010
12. ಭಕ್ತಾಮರ ಸ್ತೋತ್ರ–ಮಾನತುಂಗಾಚಾರ್ಯರ ಕನ್ನಡಾನುವಾದ–(ಸಂ.)ಎಮ್.ಬಿ.ಸೇಡಬಾಳ,ಷಹಾಪುರ,ಬೆಳಗಾವಿ.

13. ಮಹಾಪುರಾಣ ಅನುವಾದಗಳು-(ಸಂ.ಮತ್ತು ಅ.)ಶ್ರೀ.ಎ.ಶಾಂತಿರಾಜ ಶಾಸ್ತ್ರಿ.ಪ್ರ.ಪಂಡಿತರತ್ನ ಎ.ಶಾಂತಿರಾಜ ಶಾಸ್ತ್ರಿ ಟ್ರಸ್ಟ್,ಬೆಂಗಳೂರು-560 082.1993.

14. ಸಾಳ್ವ ಸಂಪುಟ-(ಸಂ.)ಪ್ರೊ.ಎಂ.ಎ.ಜಯಚಂದ್ರ, ಪ್ರ:ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2006.

15. ಕಾವ್ಯಾರ್ಥ ಪದಕೋಶ-(ಸಂ.)ಜಿ.ಎಸ್.ಶಿವರುದ್ರಪ್ಪ ಮತ್ತು ಕೆ.ವಿ.ನಾರಾಯಣ,ಕಾಮಧೇನು ಪ್ರಕಾಶನ,ಸಂ.6,ನಾಗಪ್ಪ ರಸ್ತೆ,ಶೇಷಾದ್ರಿ ಪುರಂ,ಬೆಂಗಳೂರು-560020. 1999.

16. ಕನ್ನಡ ಚಿತ್ರಕಾವ್ಯ-(ಲೇ.)ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆ,ಮೈಸೂರುವಿಶ್ವವಿದಯಾನಿಲಯ,ಮೈಸೂರು, 1987.

17. ತ್ರಿಷಷ್ಠಿಶಲಾಕಾ ಮಹಾಪುರಾಣ-(ಸಂ.)ಎಂ.ಸಿ.ಪದ್ಮನಾಭ ಶರ್ಮ,ಜೈನ್ ಸಾಹಿತ್ಯ ಪ್ರಚಾರ ಸಂಘ,ಜೈನ್ ಓರಿಯೆಂಟಲ್‌ರಿಸರ್ಚ್‌ಇನ್ಸ್ಟಿಟ್ಯೂಟ್,ಸಂ.67.ಡಿ.,ಬನುಮಯ್ಯರಸ್ತೆ,ಮೈಸೂರು.

18. ನೇಮಿಚಂದ್ರ-(ಸಂ) ಎನ್. ಅನಂತರಂಗಾಚಾರ್,ಎಂ.ಎ., ಮೈಸೂರು ವಿಶ್ವವಿದ್ಯಾನಿಲಯ.ಪ್ರಚಾರ ಪುಸ್ತಕಮಾಲೆ-80,ಮೈಸೂರು.

19. ಕನ್ನಡದಲ್ಲಿ ಅಷ್ಟಾವಧಾನ-(ಲೇ)ಶತಾವಧಾನಿ ಆರ್.ಗಣೇಶ್,ಪ್ರ.:ಕರ್ನಾಟಕ ಸಂಘ. ಪುತ್ತೂರು-1978.

20.ಸಂಸ್ಕೃತ ಸಾಹಿತ್ಯ ಇತಿಹಾಸ-(ಲೇ)ಆಚಾರ್ಯ ಬಲದೇವ ಉಪಾಧ್ಯಾಯ. (ಅ)ಎಸ್.ರಾಮಚಂದ್ರ ಶಾಸ್ತ್ರಿ. (ಪ್ರ) ಪ್ರಸಾರಾಂಗ,ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು-2003.

21. ಚಂದ್ರಸಾಗರವರ್ಣಿಯ ಕೃತಿಗಳು(ಸಂ.)ಹಂಪನಾಗರಾಜಯ್ಯ-ಎಸ್.ಶಿವಣ್ಣ. ಪ್ರ.:ಕನ್ನಡ ಸಾಹಿತ್ಯ ಪರಿಷತ್ತು,ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು.

## ಅನುಬಂಧ-2

## ಲೇಖನ ಸೂಚಿ

1. ನಾಲ್ಕನೆಯ ಮಂಗರಸ-ಪ್ರೊ.ಡಿ.ಎಲ್.ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ,16-1, 1931.
2. ನೇಮಿಚಂದ್ರ-ಜಿ.ವೆಂಕಟಸುಬ್ಬಯ್ಯ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ,44-1,1959.
3. ನೇಮಿಚಂದ್ರನ ಲೀಲಾವತಿ(ಕಥಾ ವಸ್ತು)ಎಂ.ಆರ್.ಶ್ರೀನಿವಾಸಮೂರ್ತಿ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ,10-4,1936.
4. ನೇಮಿನಾಥ ಪುರಾಣದ (ಕರ್ಣಪಾರ್ಯ ಕೃತ) ವಿಮರ್ಶೆ-ಪ್ರೊ.ಡಿ.ಎಲ್.ನರಸಿಂಹಾಚಾರ್,ಪ್ರಬುದ್ಧ ಕರ್ಣಾಟಕ.23-2,1941.
5. ವೀರ ಮಾರ್ತಾಂಡ ಚಾವುಂಡರಾಯ-ಕೆ.ಭುಜಬಲಶಾಸ್ತ್ರಿ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ.

## ಪ್ರಾಣಪ್ರಿಯ ಕಾವ್ಯದ 'ಅ'ಕಾರಾದಿ,

| | ಮೊದಲ ಸಾಲು | (ಮೂಲದ ಸಾಲು) | ಶ್ಲೋಕ ಸಂಖ್ಯೆ |
|---|---|---|---|
| ಈ | ವಿಯೋಗದ ದುಃಖ | (ಪ್ರಾಣಪ್ರಿಯಂ) | (1) |
| ಉ | ಉನ್ನತೋನ್ನತನಾದ | (ಯಾಭಿಃ ಕದಾ) | (20) |
| ಊ | ಊರಿಗೀಗಲೆ ಬಂದು | (ಗತ್ವಾನಿಜಂ ಪುರಮವಾಪ್ಯ) | (23) |
| ಎ | ಎನ್ನೊಳಂ ದಿಶಿಪೂರ್ವ | (ನಿಷ್ಕಾರಣಂ ಮಯಿಯಥಾ) | (22) |
| ಏ | ಏನು ಹೇಳಲಿ | (ತತ್ಕಿಂವದಾಮಿ ರಜನೀ) | (14) |
| ಅಂ | ಅಂದದಿಂದಲಿ ತೋಳುಬಂಧನ | (ಭಾಗ್ಯೋದಯಾತ್ತ ದಿನೇಮೇ | (8) |
| ಕಾ | ಕಾಮನೆಂಬ ಪುಳಂದ | (ಸುನಾಶುಗಸ್ಯ) | (31) |
| | ಕಾಮನಾ ಕಠಿನಂ | (ಕಂದರ್ಪ ದಾರುಣ) | (38) |
| | ಕಾಮ ವಿಕ್ಲವೆ | (ನೇಮಿರ್ಜಗಾವಥ) | (44) |
| ಗ | ಗೌರದೇಹವ ಪೊಂದಿದೀ | (ಗೋರೋಚನಾ) | (11) |
| ಚ | ಚಂದ್ರತಾನತಿ ಶೈತ್ಯದಿಂದಲಿ | (ತದ್ವೀಕ್ಷಿತಂ ಪ್ರಕುರುತೇ) | (18) |
| | ಚಿನ್ನವಣ್ಣದ ನನ್ನೊಳಂ | (ಮದ್ಗಾತ್ರಮಂಜನ ರುಚೌ) | (30) |
| ದ | ದೇವ ನಿನ್ನಯ | (ಪೂರ್ವಂ ಮಯಾ ಸಹ) | (15) |
| | ದ್ವಾರಕಾಯದುರತ್ನ | (ಪ್ರಾಕ್ಪೂರ್ಬಭೌ) | (37) |
| ನ | ನಮ್ಮ ಮಾತನು | (ಏತನ್ಮದೀರಿತ) | (5) |
| ನಾ | ನಾರಿಯೇ ಪುರುಷಂಗೆ | (ಸಂಸಾರ ಸಾರ) | (24) |
| ನಿ | ನಿನ್ನ ಕಣ್ಣೊಳು | (ಏಣೇದೃಶೌ) | (12) |
| | ನಿನ್ನನೇ ಪತಿಯೆಂದು | (ಸತ್ಯಂ ವಚಃ) | (39) |
| | ನಿನ್ನ ಕೀರ್ತನದಿಂ | (ಉಜ್ಜೃಂಭತೆ ಹೃದಯ) | (42) |
| | ನಿನ್ನ ಪಾದ ಪಯೋಜದಾ | (ಕಲ್ಯಾಣಕಲ್ಪ) | (43) |

## ಭುವನಹಳ್ಳಿ ಡಿ. ಪದ್ಮನಾಭ ಶರ್ಮರ ಕೃತಿಗಳು

1. **ಕಥಾ ಸಾಹಿತ್ಯ**

    1. ಜೈನ ರಾಮಾಯಣ (1988)
    2. ಜೈನ ಭಾರತ (1988)
    3. ಚಂದನ ಬಾಲಾ (1974)
    4. ಜೈನ ಸಾಹಿತ್ಯ ಕಥೆಗಳು (ಭಾಗ 1) 1968
    5. ಅಷ್ಟವಿಧಾರ್ಚನೆ ಕಥೆಗಳು (1970)
    6. ಆರುನೋಂಪಿ ಕಥೆಗಳು (1981)
    7. ಭಕ್ತಾಮರ ಕಥೆಗಳು (1962)
    8. ಜಂಬೂ ಸ್ವಾಮಿಯ ಕಥೆಗಳು

2. **ನಾಟಕ ಸಾಹಿತ್ಯ**

    1. ವಸಂತ ತಿಲಕೆ (1952)
    2. ನಾಲ್ಕಿರುಳ್ (1953)
    3. ವಿದುಷಿ ಕಂತಿ ಕವಯಿತ್ರಿ (1954)
    4. ಮಾಸ್ಟರ ಮಗಳು (1954)
    5. ದುರ್ದೈವಿ ದಾರಾಶಹ (1955)
    6. ಶಾಂತಿ ಸಂದೇಶ (1962)

3. **ವ್ಯಾಕರಣ – ಕೋಶ**

    1. ಕರ್ನಾಟಕ ಸಬ್ದಾನುಶಾಸನ (1967) (ನಲ್ನುಡಿಗನ್ನಡ ವ್ಯಾಖ್ಯಾನ)
    2. ಶಬ್ದಮಣಿ ದರ್ಪಣ (1976) (ನಲ್ನುಡಿಗನ್ನಡ ಟೀಕೆ)
    3. ಕನ್ನಡ ವ್ಯಾಕರಣ ದರ್ಶನ (ಅಪ್ರಕಟಿತ)
    4. ಧನಂಜಯ ಶಬ್ದಕೋಶ (1968)

4. **ಬಾಲಬೋಧೆ ಪಠ್ಯಗಳು**

    1. ಜೈನ ಬಾಲಬೋಧೆ (ಭಾಗ 1)
    2. ಜೈನ ಬಾಲಬೋಧೆ (ಭಾಗ 2)
    3. ಜೈನ ಬಾಲಬೋಧೆ (ಭಾಗ 3)
    4. ಬಾಲ ಬೋಧೆ ಪಾಠಮಾಲೆ (ಭಾಗ 1)

5. ಬಾಲ ಬೋಧೆ ಪಾಠಮಾಲೆ (ಭಾಗ 2)

6. ಬಾಲ ಬೋಧೆ ಪಾಠಮಾಲೆ (ಭಾಗ 3)

7. ವೀತರಾಗ ಪಾಠಮಾಲೆ (ಭಾಗ 1)

8. ವೀತರಾಗ ಪಾಠಮಾಲೆ (ಭಾಗ 2)

9. ವೀತರಾಗ ಪಾಠಮಾಲೆ (ಭಾಗ 3)

5. **ಕಾದಂಬರಿ**

1. ಮ್ಯಾಜಿಸ್ಟ್ರೇಟರ್ ಮಡದಿ
2. ನಿರಾಸೆಯ ನಿಟ್ಟುಸಿರು (1960)
3. ಪತಿತಪಾವನೆ (1969)
4. ನಲ್ಲೆಯಾಗಲೊಲ್ಲೆ (1982)
5. ಸತ್ಯಶೋಧನೆ (1980)
6. ದಯಾದೇವಿ (1983)

6. **ಜೀವನ ಚರಿತ್ರೆ**

1. ತ್ಯಾಗವೀರ ಬಾಹುಬಲಿ (1953)
2. ಭರತ ಬಾಹುಬಲಿ (1964)
3. ಮಹಾತ್ಯಾಗಿ (1966)
4. ಅಭಿನವವಾಗ್ದೇವಿ ಕುಂತಿ (1953)
5. ಸಾಹಸೀ ಸುಭಾಷ್ (1965)
6. ಅಮರನೆಹರೂ (1964)
7. ನಿರ್ಗ್ರಂಥ ರತ್ನ (1973)
8. ವಿಶ್ವವಂದ್ಯ ವರ್ಧಮಾನ (1974)
9. ಶ್ರೀಕಾನ್ ಜೀ ಸ್ವಾಮಿ (1975)
10. ಧರ್ಮಸ್ಥಳ ಬಾಹುಬಲಿ (1973)
11. ತೀರ್ಥಂಕರ ಭಗವಾನ್
12. ಮಹಾವೀರ (1975)
13. ಕುಲಭೂಷಣ ದೇಶ ಭೂಷಣ
14. ವಿಜಯ ಪಾರ್ಶ್ವನಾಥ (ಅಪ್ರಕಟಿತ)

7. **ಕಾವ್ಯಂ**

1. ಸಮಂತ ಭದ್ರ ಸಂಗತಿ (ಸಾಂಗತ್ಯ) 1954
2. ಕನ್ನಡ ಮೇಘದೂತ (ಅಪ್ರಕಟಿತ) (ಮಂದಾಕ್ರಾಂತ)
3. ಆದಿನಾಥ ಸಂಗತಿ (ಭಾಮಿನೀ) 1957
4. ಸ್ಮಾರಕ ಷಟ್ಪದೀ ರತ್ನಮಾಲೆ (1955)
5. ಗೀತವೀತರಾಗ (ಅಷ್ಟಷಟ್ಪದಿ) ಸಂಪಾದಿತ 1965
6. ಪ್ರಾಣಪ್ರಿಯಕಾವ್ಯ (ಮಲ್ಲಿಕಾಮಾಲೆ) 1957
7. ವರ್ಧಮಾನ ಚರಿತ್ರೆ (1993)

8. **ಪೂಜಾ ಮತ್ತು ಸ್ತೋತ್ರ ಸಾಹಿತ್ಯ**

1. ಜೈನ ಸಂಸ್ಕೃತಿಯ ಪರ್ವಗಳು 1969
2. ಸಮ್ಮೇದ ಶಿಖರಜೀ ಕ್ಷೇತ್ರಪೂಜೆ (1969)(ಭಾಮಿನೀ)
3. ಸಮ್ಮೇದಗಿರಿ ತೀರ್ಥಕ್ಷೇತ್ರ ಪೂಜೆ 1971
4. ನಿತ್ಯಪೂಜಾವಿಧಿ (1970)
5. ಜೈನಸಂಸ್ಕೃತಿಯ ಭಾದ್ರಪದಮಾಸದ ವ್ರತಪೂಜಾವಿಧಿ (1975)
6. ನಂದೀಶ್ವರ ಅಷ್ಟಾಹ್ನಿಕ ಪೂಜಾ ವಿಧಾನ (1975)
7. ವೃಷಭ ತೀರ್ಥಂಕರ ಸ್ತೋತ್ರ 1986
8. ಯಕ್ಷೀಪೂಜೆ 1983
9. ಅರ್ಚನಾ (1983)
10. ಬೃಹತ್ ಸಾಮಾಯಿಕ ಪಾಠ
11. ಗೋಮಟೇಶ ಥುವಿ

9. **ಜೈನ ಧರ್ಮ ಶಾಸ್ತ್ರ**

1. ಸತ್ಕ್ರಿಯಾ ದರ್ಪಣ (1951)
2. ಆದಿನಾಥ ಸಂಕ್ಷಿಪ್ತ ಸಂಗತಿ (1957)
3. ವಸ್ತು ವಿಜ್ಞಾನಸಾರ (1953)
4. ಇಷ್ಟೋಪದೇಶ (1965)
5. ಆತ್ಮದರ್ಶನ (1957)
6. ಆಚಾರ್ಯತುಳಸಿ ಮತ್ತು ಅಣುವ್ರತ ಆಂದೋಲನ (1958)
7. ಅಣುವ್ರತ ಆಂದೋಲನ ಮತ್ತು ವಿದ್ಯಾರ್ಥಿಗಳು
8. ರಯಣಸಾರ (ಅನುವಾದ)

9. ನಿಯಮಸಾರ (ಅನುವಾದ)

10. ಲಘುಸಿದ್ಧಾಂತ ಪ್ರವೇಶಿಕಾ (1970)

11. ಆರು ಗುರಾಣಿಗಳು (ಅನುವಾದ) (1970)

12. ಜೈನಧರ್ಮ ಸ್ವತಂತ್ರ ಧರ್ಮವೇ 1969

13. ಅಣುವ್ರತ (1959)

14. ತತ್ವಾರ್ಥಸೂತ್ರ – ಭಾಗ 1 ಮತ್ತು 2

15. ಸಾಮಾಯಿಕ ವಿಧಿ

16. ಅಹಿಂಸೆ ವಿಶ್ವಧರ್ಮ

17. ಸಮಯದ ಬೆಲೆ (1981)

18. ಪ್ರವಚನ ಸಾರ

19. ಪಂಚಾಸ್ತಕಾಯ ಸಂಗ್ರಹ

20. ನಿಮ್ಮನ್ನು ನೀವು ತಿಳಯಿರಿ (1979)

21. ಪಿಚ್ಛ ಮತ್ತು ಕಮಂಡಲು.

22. ವಿಶ್ವಧರ್ಮದ ಮಂಗಲಪಾಠ.

23. ಶಾಸನದೇವತೆಗಳ ಮತ್ತು ದೇವರ ಮಾನ್ಯತೆ 1983

24. ಧರ್ಮವು ಬುದ್ಧಿಗಮ್ಯವೇನು 1969

25. ಸಿದ್ಧಾಂತಸಾರ ಸಂಗ್ರಹ (1986)

26. ಸರ್ವಾರ್ಥಸಿದ್ಧಿ (ಅನುವಾದ) 1988

27. ಮೂಲಾರಾಧನಾ (1990)

28. ಸೋದರಿ ಶ್ರೀ ವಚನಾಮೃತ (1978)

10. **ಪತ್ರಿಕಾ ಲೇಖನಗಳು ಪ್ರಕಟವಾದ ಪತ್ರಿಕೆಗಳು:**

1. ಪ್ರಜಾಮತ (ವಾ)

2. ಜನವಾಣಿ (ಮಾ)

3. ಸನ್ಮತಿ (ಮಾ)

4. ಕನ್ನಡ ಪ್ರಭ (ದಿ)

5. ಪ್ರಜಾವಾಣಿ (ದಿ)

6. ವಿಶ್ವಕರ್ನಾಟಕ (ದಿ)

7. ಪ್ರಭಾತ (ವಾ)

8. ವಿವೇಕಾಭ್ಯುದಯ

9. ತಾಯಿನಾಡು

10. ಗುರುದೇವ

11. ಮಲೆನಾಡು

12. ಸಂಯುಕ್ತ ಕರ್ನಾಟಕ

13. ವೀರಭಾರತಿ ಮತ್ತು ಹಲವಾರು ಸ್ಮರಣಸಂಚಿಕೆಗಳು

## (4) ಭುವನಹಳ್ಳಿ ಡಿ. ಪದ್ಮನಾಭಶರ್ಮರ ಗ್ರಂಥ ಲೇಖನಗಳು

| | | | |
|---|---|---|---|
| 1. | ಕಥಾಸಾಹಿತ್ಯ | .. | 7 |
| 2. | ನಾಟಕ ಸಾಹಿತ್ಯ | .. | 6 |
| 3. | ವ್ಯಾಕರಣ ಕೋಶ | .. | 4 |
| 4. | ಬಾಲಬೋಧೆ ಪದ್ಯಗಳು | .. | 9 |
| 5. | ಕಾದಂಬರಿ | .. | 6 |
| 6. | ಜೀವನ ಚರಿತ್ರೆ | .. | 17 |
| 7. | ಕಾವ್ಯ | .. | 9 |
| 8. | ಪೂಜಾ ಸ್ತೋತ್ರ ಸಾಹಿತ್ಯ | .. | 12 |
| 9. | ಜೈನ ಧರ್ಮ ಶಾಸ್ತ್ರ | .. | 36 |
| | ಒಟ್ಟು | .. | 104 |

